

# ವಿವೇಕಪ್ರಭ

ಅಕ್ಟೋಬರ್-2017

ಸಂಪುಟ 18 ಸಂಚಿಕೆ 10

ಪ್ರಾರ್ಥನೆ : ಭ್ರಮರಾಂಬಾಷ್ಟಕದಿಂದ 4
ಸಂಪಾದಕೀಯ : ಬೆಳಕ ಬೀರುವ ಹಾದಿ – ೫ 7
ವಚನವೇದದಿಂದ : ರಾಮಾವತಾರ 10
ಸ್ತೋತ್ರ ರಚನೆ : ಶ್ರೀರಾಮಕೃಷ್ಣಸಂಘಸ್ತೋತ್ರಮ್ 24
ಪುಸ್ತಕ ಪರಿಚಯ : ದಿವ್ಯಸ್ಪರ್ಶದಿಂದ ಬೆಳಗಿದ ಬದುಕು 32
ಸಂತರ ಜೀವನ : ತ್ಯಾಗಿ ವೀರ ಸಂತ ತೇಗ್ ಬಹದ್ದೂರ್ 33
ಚಿತ್ರಕಥೆ : ಕಲಿಕಾಮ ನಾಯನಾರ್ 38
ಸುದ್ದಿ ಸಂಚಯ : ಮಹಾಸಂಘದ ಇತ್ತೀಚಿನ ಚಟುವಟಿಕೆಗಳು 42






## ವಿಶೇಷ ಲೇಖನ

ಕೈಲಾಸ ಮಾನಸ ಸರೋವರ ಯಾತ್ರೆ
*ಡಾ. ಹೆಚ್. ಪಾಂಡುರಂಗ ವಿಠಲ* 11
ಕೂರೇಶರ ಗುರುಭಕ್ತಿ
*ಪುಷ್ಪಾ ಶೇಷಾದ್ರಿ* 21
ಜಾನಕಿ ಷಾ
*ಸ್ವರ್ಣಗೌರಿ* 23



## ಧಾರಾವಾಹಿ

ಶ್ರೀಮಾತೆ – ಭಾಗ ೧೦
*ಆಶುತೋಷ್ ಮಿತ್ರ* 17
ಕಳೆದ ದಿನಗಳ ನೆನಪುಗಳು – ೧೧
*ಸ್ವಾಮಿ ಶ್ರದ್ಧಾನಂದ* 26
ಶ್ರೀಮಾತೆಯವರ ಪತ್ರಗಳು – ೬
*ಪ್ರವ್ರಾಜಿಕಾ ಧರ್ಮಪ್ರಾಣಾ* 30

ವ್ಯವಸ್ಥಾಪಕ ಸಂಪಾದಕರು
*ಸ್ವಾಮಿ ಆತ್ಮಜ್ಞಾನಂದ*

ಸಂಪಾದಕರು
*ಸ್ವಾಮಿ ಜ್ಞಾನಯೋಗಾನಂದ*

ನೆರವು:
*ಆರ್. ಎಸ್. ಪೂರ್ಣಾನಂದ*
*ಡಾ. ಕೆ. ಎಲ್. ಪ್ರಸನ್ನಾಕ್ಷೀ*
*ಡಾ. ಎಚ್. ಪಾಂಡುರಂಗ ವಿಠಲ*

ಅಕ್ಷರ ಜೋಡಣೆ
*ಶ್ರೀರಾಮಕೃಷ್ಣ ಆಶ್ರಮ, ಮೈಸೂರು*

ಮುದ್ರಣ
*ಮಯೂರ್ ಗ್ರಾಫಿಕ್ಸ್, ಬೆಂಗಳೂರು*

ಮುಖಪುಟ:
ಬೆಳಕಾಗಲಿ ದೀಪಾವಳಿ

ಈ ಪತ್ರಿಕೆಯ ಧ್ಯೇಯ

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– ಸ್ವಾಮಿ ವಿವೇಕಾನಂದ

E-mail: mysuru.vivekaprabha@rkmm.org
Website: www.vivekaprabha.net
ಫೋನ್ : 9481533505

ಚಂದಾ ವಿವರ

ಬಿಡಿ ಪ್ರತಿ : ₹ 14
ವಾರ್ಷಿಕ : ₹ 140
ಮೂರು ವರ್ಷ : ₹ 375
ಆಜೀವ (25 ವರ್ಷ) : ₹ 3,000
ಪೋಷಕರು : ₹ 5,000 ಅಥವಾ ಹೆಚ್ಚು.
ವಿದೇಶಗಳಿಗೆ : (ಏರ್‌ಮೇಲ್)
ವಾರ್ಷಿಕ : $ 20; ಮೂರು ವರ್ಷ : $ 60
ಆಜೀವ (25ವರ್ಷ) : $ 300
ಪೋಷಕರು : $ 600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

## ಪ್ರಾರ್ಥನೆ

# ಭ್ರಮರಾಂಬಾಷ್ಟಕದಿಂದ

**ಚಾಂಚಲ್ಯಾರುಣಲೋಚನಾಂಚಿತಕೃಪಾಚಂದ್ರಾರ್ಕಚೂಡಾಮಣಿಂ**
**ಚಾರುಸ್ಮೇರಮುಖಾಂ ಚರಾಚರಜಗತ್ಸಂರಕ್ಷಣೀಂ ತತ್ಪದಾಂ ।**
**ಚಂಚಚ್ಚಂಪಕನಾಸಿಕಾಗ್ರವಿಲಸನ್ಮುಕ್ತಾಮಣೀರಂಜಿತಾಂ**
**ಶ್ರೀಶೈಲಸ್ಥಲವಾಸಿನೀಂ ಭಗವತೀಂ ಶ್ರೀಮಾತರಂ ಭಾವಯೇ ॥ ೧ ॥**

ಆಕೆ ಚಂಚಲವಾದ ಕೆಂಪಾಗಿರುವ ಕಣ್ಣುಗಳಿಂದ ಸೂಸುವ ಕೃಪೆಯಿಂದ ಮನೋಹರಳಾಗಿದ್ದಾಳೆ, ಚಂದ್ರ-ಸೂರ್ಯರನ್ನು ತಲೆಯ ಆಭರಣವಾಗಿ ಧರಿಸಿದ್ದಾಳೆ. ಆಕೆಯ ಮುಖವು ಸುಂದರವಾದ ಮುಗುಳ್ನಗೆಯಿಂದ ಚಿತ್ತಾಕರ್ಷಕವಾಗಿದೆ. ಚರಾಚರ ಸಮಸ್ತ ಜಗತ್ತಿಗೆ ಅವಳು ರಕ್ಷಕಿಯಾಗಿದ್ದಾಳೆ. ಮೂಗಿನ ತುದಿಯಲ್ಲಿ ತೂಗಾಡುತ್ತಿರುವ ಮುತ್ತಿನ ಆಭರಣದಿಂದ ಆಕೆಯ ಮುಖ ವಿಶೇಷವಾಗಿ ಬೆಳಗುತ್ತಿದೆ. ಶ್ರೀಶೈಲಕ್ಷೇತ್ರದಲ್ಲಿ ನೆಲೆಸಿರುವ ಶ್ರೀಮಾತೆ ಭ್ರಮರಾಂಬಿಕಾ ದೇವಿಯನ್ನು ಭಾವಿಸುತ್ತೇನೆ.

**ಕಸ್ತೂರೀತಿಲಕಾಂಚಿತೇಂದುವಿಲಸತ್ಪ್ರೋದ್ಭಾಸಿಫಾಲಸ್ಥಲೀಂ**
**ಕರ್ಪೂರದ್ರವಮಿಶ್ರಚೂರ್ಣಖದಿರಾಮೋದೋಲ್ಲಸದ್ವೀಟಿಕಾಂ ।**
**ಲೋಲಾಪಾಂಗತರಂಗಿತೈರಧಿಕೃಪಾಸಾರೈರ್ನತಾನಂದಿನೀಂ**
**ಶ್ರೀಶೈಲಸ್ಥಲವಾಸಿನೀಂ ಭಗವತೀಂ ಶ್ರೀಮಾತರಂ ಭಾವಯೇ ॥ ೨ ॥**

ಆಕೆಯು ಹಣೆಯಲ್ಲಿ ಕಸ್ತೂರೀತಿಲಕವನ್ನು ಇಟ್ಟಿರುವಳು. ಹಣೆಯ ಮೇಲೆ ವಿರಾಜಮಾನವಾಗಿರುವ ಚಂದ್ರನಿಂದ ವಿಶೇಷವಾಗಿ ಶೋಭಿಸುತ್ತಿರುವಳು. ಕರ್ಪೂರ ಮೊದಲಾದ ಸುಗಂಧದ್ರವ್ಯಗಳನ್ನು ಬೆರೆಸಿರುವ ಪಾಯಸವನ್ನು ಸೇವಿಸುತ್ತಿರುವಳು. ಚಂಚಲವಾದ ತನ್ನ ಓರೆನೋಟಗಳಿಂದ ಕೃಪೆಯ ಪ್ರವಾಹವನ್ನೇ ಸುರಿಸುತ್ತಿರುವಳು. ತನ್ನನ್ನು ಆಶ್ರಯಿಸಿದವರಿಗೆ ಆನಂದವನ್ನು ಉಂಟುಮಾಡುವ ಶ್ರೀಶೈಲನಿವಾಸಿನಿ ತಾಯಿ ಭ್ರಮರಾಂಬಿಕೆಯನ್ನು ಚಿಂತಿಸುತ್ತೇನೆ.

**ಗಾಯತ್ರೀಂ ಗರುಡಧ್ವಜಾಂ ಗಗನಗಾಂ ಗಾಂಧರ್ವಗಾನಪ್ರಿಯಾಂ**
**ಗಂಭೀರಾಂ ಗಜಗಾಮಿನೀಂ ಗಿರಿಸುತಾಂ ಗಂಧಾಕ್ಷತಾಲಂಕೃತಾಂ ।**
**ಗಂಗಾಗೌತಮಗರ್ಗಸನ್ನುತಪದಾಂ ಗಾಂ ಗೌತಮೀಂ ಗೋಮತೀಂ**
**ಶ್ರೀಶೈಲಸ್ಥಲವಾಸಿನೀಂ ಭಗವತೀಂ ಶ್ರೀಮಾತರಂ ಭಾವಯೇ ॥ ೩ ॥**

ಈಕೆ ಗಾಯತ್ರೀದೇವಿ. ಗರುಡನನ್ನು ತನ್ನ ಚಿಹ್ನೆಯಾಗಿ ಹೊಂದಿದ್ದಾಳೆ. ಹೃದಯದ ಆಕಾಶದಲ್ಲಿ ವಿರಾಜಮಾನಳಾಗಿದ್ದಾಳೆ. ಸಂಗೀತವನ್ನು



ಆಲಿಸುವುದರಲ್ಲಿ ಪ್ರೀತಿಯುಳ್ಳ ಈಕೆ ಆನೆಯಂತೆ ಗಂಭೀರವಾದ ನಡಿಗೆಯುಳ್ಳವಳು. ಗಂಧ, ಅಕ್ಷತೆಗಳಿಂದ ಅಲಂಕಾರಗೊಂಡಿರುವ ಈಕೆ ಗಿರಿರಾಜ ಹಿಮವಂತನ ಮಗಳು. ಗಂಗೆ, ಗೌತಮ, ಗರ್ಗರು ಈಕೆಯ ಮಹಿಮೆಯನ್ನು ಕೊಂಡಾಡಿದ್ದಾರೆ. ಭೂಮಿ, ಗೌತಮಿ, ಗೋದಾವರೀ ನದಿಗಳ ಸ್ವರೂಪದಿಂದ ಇರುವ ಶ್ರೀಶೈಲಕ್ಷೇತ್ರದಲ್ಲಿ ವಾಸಿಸುತ್ತಿರುವ ಶ್ರೀಮಾತೆ ಭಗವತಿ ಭ್ರಮರಾಂಬಿಕಾದೇವಿಯನ್ನು ನಾನು ಭಾವಿಸುತ್ತೇನೆ.

-ಶ್ರೀ ಶಂಕರಾಚಾರ್ಯ

## ಸೂಕ್ತಿಪ್ರಭ

ವಿವೇಕವಿಲ್ಲದ, ವಿಷಯವಸ್ತುಗಳಿಂದ ಜರ್ಜರಿತವಾದ ವ್ಯಕ್ತಿಗಳ ಜೀವನ ದುಃಖದಿಂದ ಕೂಡಿರುತ್ತದೆ. ಸತ್ಯವನ್ನು ಕುರಿತ ಜ್ಞಾನವನ್ನು ಹೊಂದಿ ಶಾಂತಿಯನ್ನು ಗಳಿಸಿದವರ ಜೀವನ ಆನಂದದಾಯಕವಾಗಿರುವುದು. – ಶ್ರೀರಾಮ

ಅತ್ಯಂತ ಉತ್ತಮವಾದುದು ಬೇಕಿದ್ದರೆ ನಿಮ್ಮಲ್ಲಿ ಸಮತ್ವವಿರಬೇಕು. ಅತ್ಯಂತ ವಿರುದ್ಧವಾದ ಸನ್ನಿವೇಶ ಎದುರಾದರೂ ನಿಮ್ಮ ಸಮತೋಲನವನ್ನು ಕಾಪಾಡಿಕೊಳ್ಳಿ. –ಶ್ರೀಕೃಷ್ಣ

ಆಸೆಯೇ ಕೆಡುಕಿನ ಮೂಲ. ದ್ವೇಷ ಕೆಡುಕಿನ ಮೂಲ. ಭ್ರಾಂತಿ ಕೆಡುಕಿನ ಮೂಲ. 'ಅದು ನನ್ನ ಬಳಿಗೆ ಬರಲಾರದು' ಎಂದು ಕೆಡುಕಿನ ಬಗ್ಗೆ ಲಘುವಾಗಿ ಭಾವಿಸಬೇಡ. ಹನಿಗಳು ಒಂದೊಂದಾಗಿ ಬೀಳುತ್ತ ಒಂದು ದೊಡ್ಡ ಹಂಡೆಯನ್ನೇ ತುಂಬಿಸಬಹುದು. –ಗೌತಮ ಬುದ್ಧ

ಪ್ರಬುದ್ಧತೆ ಹಾಗೂ ಮನಸ್ಸಿನ ಪ್ರಶಾಂತ ಸ್ಥಿತಿಯನ್ನು ಹೊಂದಿ ಸಂಯಮದಿಂದ ಗ್ರಾಮ, ನಗರಗಳಲ್ಲಿ ಸುತ್ತಾಡು; ಶಾಂತಿಯ ಮಾರ್ಗವನ್ನು ಪಸರಿಸು. – ಮಹಾವೀರ

ಭಕ್ತಿಭರಿತ ಹೃದಯದಿಂದ ಭಗವಂತನ ಗುಣಗಾನ ಮಾಡೋಣ, ಅವನ ನಾಮೋಚ್ಚಾರಣೆ ಮಾಡೋಣ. ಹಾಗೆ ಮಾಡಿದಾಗ ಎಲ್ಲ ದುಃಖಗಳ ನಿವಾರಣೆಯಾಗುವುದು. –ಗುರು ನಾನಕ್



# SRI RAMAKRISHNA ADVAITA ASHRAMA

Ashrama Road, Kalady -683574, Dist. Ernakulam, Kerala
Email: kalady@rkmm.org Ph: 0484-2462345/2461071

## ಭಕ್ತರು ಹಾಗೂ ಹಿತೈಷಿಗಳಲ್ಲಿ ಒಂದು ವಿಜ್ಞಾಪನೆ



ಕಾಲಡಿಯು ಶಿವನ ಅವತಾರವಾದ, ಮಹಾನ್ ಆಧ್ಯಾತ್ಮಿಕ ವ್ಯಕ್ತಿಯೂ, ಅದ್ವೈತ ವೇದಾಂತದ ಸಂಸ್ಥಾಪಕರೂ ಆದ ಆದಿ ಶಂಕರಾಚಾರ್ಯರ ಜನ್ಮಸ್ಥಳವಾಗಿದೆ. ಇಲ್ಲಿನ ಶ್ರೀರಾಮಕೃಷ್ಣ ಅದ್ವೈತ ಆಶ್ರಮವು ಪೂರ್ಣಾ ನದಿಯ ದಡದಲ್ಲಿದೆ. 1936ರಲ್ಲಿ ಆರಂಭವಾದ ಈ ಆಶ್ರಮವು 1941ರಲ್ಲಿ ಬೇಲೂರು ಮಠದ ರಾಮಕೃಷ್ಣ ಮಠಕ್ಕೆ ಸೇರ್ಪಡೆಗೊಂಡಿತು. ಸ್ವಾಮಿ ಬ್ರಹ್ಮಾನಂದರ ಶಿಷ್ಯರಾಗಿದ್ದ ಸ್ವಾಮಿ ಆಗಮಾನಂದರು ಈ ಆಶ್ರಮದ ಸ್ಥಾಪಕ ಅಧ್ಯಕ್ಷರಾಗಿದ್ದರು. ಆಶ್ರಮವು ಆರಂಭವಾದ ನಂತರ ಅದು ಕೇರಳದಲ್ಲಿ ಆಧ್ಯಾತ್ಮಿಕತೆ, ಸಾಮಾಜಿಕ ಅಭಿವೃದ್ಧಿ ಹಾಗೂ ಸೇವಾಕಾರ್ಯಗಳ ಒಂದು ಮುಖ್ಯ ಕಾರ್ಯಕ್ಷೇತ್ರವೆನಿಸಿದೆ. ಕಳೆದ 77 ವರ್ಷಗಳಿಂದ ನಾವು ಸಮಾಜ ಕಲ್ಯಾಣ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಅಮೂಲ್ಯ ಸೇವೆಯನ್ನು ಅನವರತ ಸಲ್ಲಿಸುತ್ತಿದ್ದೇವೆ.

ಆಶ್ರಮವು ವಿವಿಧ ಶೈಕ್ಷಣಿಕ ಸಂಸ್ಥೆಗಳ, ವಿದ್ಯಾರ್ಥಿ ನಿಲಯ, ಸಮಾಜ ಕಲ್ಯಾಣ ಕೇಂದ್ರ, ಕಂಪ್ಯೂಟರ್ ಹಾಗೂ ಬೆರಳಚ್ಚು ತರಬೇತಿ ಕೇಂದ್ರಗಳ ಮೂಲಕ ವೈವಿಧ್ಯಮಯವಾದ ಸಮಾಜಸೇವಾ ಕಾರ್ಯಗಳನ್ನು ನಡೆಸುತ್ತಿದೆ. ಈ ಆಶ್ರಮದಲ್ಲಿ ವಿಶ್ವಭ್ರಾತೃತ್ವ ಮಂದಿರ, ಸಭಾಂಗಣ ಹಾಗೂ ಶಾಲೆಗಳಿವೆ. (ಶಾಲೆಯಲ್ಲಿ ಕಿಂಡರ್‌ಗಾರ್ಟನ್ ನಿಂದ +2 ವರೆಗಿನ (ವಸತಿರಹಿತ) ವಿದ್ಯಾರ್ಥಿಗಳು ಓದುತ್ತಿದ್ದಾರೆ. ಅವರಿಗೆ ಶಾಲಾವಾಹನ, ಕ್ರೀಡಾಂಗಣ, ಗ್ರಂಥಾಲಯ ಮೊದಲಾದ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ.) 1966ರಿಂದ ಆಶ್ರಮವು ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗಾಗಿ 'ಬುಡಕಟ್ಟು ವಿದ್ಯಾರ್ಥಿನಿಲಯ' ವನ್ನು ನಡೆಸುತ್ತಿದೆ. ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗಾಗಿ ಒಂದು ಕಂಪ್ಯೂಟರ್ ಹಾಗೂ ಬೆರಳಚ್ಚು ತರಬೇತಿ ಕೇಂದ್ರವನ್ನೂ ಆಶ್ರಮ ನಡೆಸುತ್ತಿದ್ದು, ಅದು ಅವರಿಗೆ ಸರ್ಕಾರಿ ಹಾಗೂ ಖಾಸಗಿ ಕಂಪೆನಿಗಳಲ್ಲಿ ಉದ್ಯೋಗ ಪಡೆಯಲು ನೆರವಾಗುತ್ತಿದೆ. ಮುವಾಟ್ಟುಪುಳ ಎಂಬಲ್ಲಿ ಈ ಆಶ್ರಮದ ಉಪಕೇಂದ್ರವೂ ಕಾರ್ಯ ನಿರ್ವಹಿಸುತ್ತಿದೆ.

ಈ ಮೇಲಿನ ಚಟುವಟಿಕೆಗಳನ್ನು ನಡೆಸಿಕೊಂಡು ಬರಲು ಆಶ್ರಮವು ಪ್ರಧಾನವಾಗಿ ನಿಮ್ಮಂತಹ ಭಕ್ತರ ಹಾಗೂ ಹಿತೈಷಿಗಳ ಆರ್ಥಿಕ ನೆರವನ್ನೇ ಆಶ್ರಯಿಸಬೇಕಾಗಿದೆ. ಹಲವು ವೇಳೆ ದಾನ-ದತ್ತಿಗಳ ಕೊರತೆ, ಹಣದುಬ್ಬರ ಮುಂತಾದ ಕಾರಣಗಳಿಂದ ನಮ್ಮ ಆರ್ಥಿಕ ಮೂಲವು ಇಂಗಿಹೋಗುತ್ತಿದೆ. ಈ ಕಾರಣಗಳಿಂದ ತಾವು ನಮ್ಮ ಉದಾತ್ತ ಸೇವಾಕಾರ್ಯಗಳಿಗೆ ನೆರವಾಗುವಂತೆ ಉದಾರವಾಗಿ ಧನಸಹಾಯ ಮಾಡಲು ಹಾಗೂ ತಮ್ಮ ಬಂಧು-ಮಿತ್ರರಿಗೂ ಈ ದಿಕ್ಕಿನಲ್ಲಿ ಪ್ರೇರಣೆ ನೀಡಲು ತಮ್ಮನ್ನು ಕಳಕಳಿಯಿಂದ ವಿನಂತಿಸಿಕೊಳ್ಳುತ್ತಿದ್ದೇವೆ.

| ಕ್ರ. ಸಂ. | ಚಟುವಟಿಕೆ | ವಾರ್ಷಿಕ ವೆಚ್ಚವನ್ನು ಪೂರೈಕೆ ಮಾಡಲು ತಗಲುವ ಕನಿಷ್ಠ ಧನಸಹಾಯ |
|---|---|---|
| 1. | ನಿತ್ಯ ಸೇವಾಕಾರ್ಯಗಳು - ಶ್ರೀರಾಮಕೃಷ್ಣರ ಪೂಜೆ, ಜಯಂತಿ ಉತ್ಸವಗಳು, ಆಶ್ರಮ ನಿವಾಸ-ನಿರ್ವಹಣೆ, ನಿತ್ಯ ಅನ್ನದಾನ ಹಾಗೂ ಸಾಧುಸೇವೆ. | 10 ಲಕ್ಷ ರೂ. |
| 2. | ಶೈಕ್ಷಣಿಕ - ಶಾಲಾ ಚಟುವಟಿಕೆಗಳ ನಿರ್ವಹಣೆ, ಕಟ್ಟಡಗಳ ನಿರ್ವಹಣೆ, ಶಾಲಾ ಚಟುವಟಿಕೆಗಳ ಆಧುನೀಕರಣ ಹಾಗೂ ಉನ್ನತೀಕರಣ, ಬಡ ವಿದ್ಯಾರ್ಥಿಗಳಿಗೆ ನೆರವು ನೀಡುವ ನಿಧಿ, ಸ್ಕಾಲರ್‌ಶಿಪ್ ಇತ್ಯಾದಿ. | 15 ಲಕ್ಷ ರೂ. |
| 3. | ಸಮಾಜ ಅಭಿವೃದ್ಧಿ ಹಾಗೂ ಕಲ್ಯಾಣ ಸೇವಾಕಾರ್ಯಗಳು - ಶ್ರೀರಾಮಕೃಷ್ಣ ಗುರುಕುಲಂ ವಿದ್ಯಾರ್ಥಿನಿಲಯದ ಖರ್ಚುವೆಚ್ಚಗಳು, ಪರಿಶಿಷ್ಟ ವರ್ಗ ಕಲ್ಯಾಣ, ಪರಿಶಿಷ್ಟ ಜಾತಿ ತರಬೇತಿ ಕೇಂದ್ರ, ಕಂಪ್ಯೂಟರ್ ಹಾಗೂ ಬೆರಳಚ್ಚು ತರಬೇತಿ ಕೇಂದ್ರ, ಬಡವರಿಗೆ ಹಾಗೂ ವಿಧವೆಯರಿಗೆ ಆರ್ಥಿಕ ನೆರವು ಇತ್ಯಾದಿ. | 25 ಲಕ್ಷ ರೂ. |

ತಮ್ಮ ದೇಣಿಗೆಯನ್ನು ನೀವು ಚೆಕ್/ಡಿ.ಡಿ.(''Sri Ramakrishna Advaita Ashrama'' ಹೆಸರಿನಲ್ಲಿ), ಇಲೆಕ್ಟ್ರಾನಿಕ್ ವರ್ಗಾವಣೆ ಮೂಲಕ ಕಳುಹಿಸಬಹುದು. (Canara Bank, Kalady IFSC Code CNRB0002921 Account Number 29211101005444.) ದೇಣಿಗೆಯನ್ನು ಕಳುಹಿಸಿದ ಬಳಿಕ ತಮ್ಮ ಹೆಸರು, ಪೂರ್ಣ ವಿಳಾಸ, ಪ್ಯಾನ್ ನಂಬರ್ ಇವನ್ನು kalady@rkmm.org ಈ ವಿಳಾಸಕ್ಕೆ ಇ-ಮೇಲ್ ಮೂಲಕ ಕಳುಹಿಸಿಕೊಡಬೇಕು. ನೀವು ನೀಡುವ ದೇಣಿಗೆಯು ಆದಾಯ ತೆರಿಗೆ ಕಾಯಿದೆಯ u/s 80G ತೆರಿಗೆ ವಿನಾಯಿತಿ ಪಡೆಯಲು ಅರ್ಹವಾಗಿರುತ್ತದೆ. ರೂ.10,000/- ಕ್ಕೂ ಹೆಚ್ಚಿನ ಮೊತ್ತವನ್ನು ದತ್ತಿಯನ್ನಾಗಿ ಪರಿಗಣಿಸಿ ಸ್ವೀಕರಿಸಲಾಗುವುದು.

ಭಗವಾನ್ ಶ್ರೀರಾಮಕೃಷ್ಣರು ನಿಮ್ಮ ಎಲ್ಲ ಕಾರ್ಯಚಟುವಟಿಕೆಗಳಲ್ಲಿ ತಮ್ಮ ಕೃಪೆಯನ್ನು ಹರಿಸಲಿ ಎಂಬುದೇ ನಮ್ಮ ಹೃತ್ಪೂರ್ವಕ ಪ್ರಾರ್ಥನೆ.

ಭಗವತ್ಸೇವೆಯಲ್ಲಿ ತಮ್ಮ,
ಸ್ವಾಮಿ ಶ್ರೀವಿದ್ಯಾನಂದ
ಅಧ್ಯಕ್ಷರು






# ಶ್ರೀರಾಮಕೃಷ್ಣ ಮಠ

ರಿಸರ್ವ್ ಲೈನ್, ನ್ಯೂ ನಾಥಂ ರಸ್ತೆ ,
ಮದುರೈ - 625 014 ತಮಿಳುನಾಡು
ಫೋನ್: 0452-2680224
ಇಮೇಲ್ : madurai@rkmm.org

## ಮನವಿ

ಆತ್ಮೀಯ ಬಾಂಧವರೆ,

ಇದು '**ಶ್ರೀರಾಮಕೃಷ್ಣ ಶಾರದಾ ವಿದ್ಯಾಲಯ**'ದ ಆವರಣದಲ್ಲಿ ಭಗವತ್ಕೃಪೆಯಿಂದ ನಿರ್ಮಾಣ ಹೊಂದಲಿರುವ ಒಂದು ಹೊಸ ಕಟ್ಟಡಕ್ಕಾಗಿ ನಿಧಿಸಂಗ್ರಹ ಮಾಡುವ ಉದ್ದೇಶದಿಂದ ಮಾಡಿರುವ ಬಿನ್ನಹವಾಗಿದೆ. ಇದಕ್ಕಾಗಿ ಭಗವಂತನಲ್ಲಿ ಪ್ರಾರ್ಥನೆ ಮಾಡುತ್ತ, ನಮ್ಮ ಸುತ್ತಮುತ್ತ ನಾವು ಸಲ್ಲಿಸುತ್ತಿರುವ ಸೇವಾಕಾರ್ಯಗಳನ್ನು ಕುರಿತು ಇಲ್ಲಿ ಕೆಲವು ಮಾಹಿತಿಗಳನ್ನು ನೀಡಬಯಸುತ್ತೇವೆ:

೧. ಪ್ರತಿದಿನ ಬೆಳಗ್ಗೆ ನಾವು ಮಠದ ಆವರಣದಲ್ಲಿ 120 ಮಂದಿ ವಿದ್ಯಾರ್ಥಿಗಳಿಗೆ ಉಚಿತ ಆಹಾರವನ್ನು ಒದಗಿಸುತ್ತಿದ್ದೇವೆ.

೨. ಮಠದ ಆವರಣದಲ್ಲಿರುವ ಅಲೋಪಥಿ ಹಾಗೂ ಹೋಮಿಯೋಪಥಿ ಚಿಕಿತ್ಸಾಲಯಗಳ ಮೂಲಕ ನಾವು ಬಡ ಹಾಗೂ ಅನಾರೋಗ್ಯದಿಂದಿರುವ ಜನರಿಗೆ ಉಚಿತ ಆರೋಗ್ಯ ಸೌಕರ್ಯವನ್ನು ನೀಡುತ್ತಿದ್ದೇವೆ.

೩. ಉಚಿತ ವೈದ್ಯಕೀಯ ಶಿಬಿರಗಳು:

i) ಉಚಿತ ನೇತ್ರಪರೀಕ್ಷೆ ಶಿಬಿರ - ಪ್ರತಿ ತಿಂಗಳ ಮೂರನೆಯ ಭಾನುವಾರ
ii) ಉಚಿತ ಆಕ್ಯುಪಂಕ್ಚರ್ ಶಿಬಿರ - ಪ್ರತಿ ತಿಂಗಳ ಮೂರನೆಯ ಭಾನುವಾರ
iii) ಉಚಿತ ಸಾಮಾನ್ಯ ವೈದ್ಯಕೀಯ ಶಿಬಿರ - ಕೆಲವು ತಿಂಗಳಿಗೆ ಒಂದು ಬಾರಿ

**ಶಾರದಾ ವಿದ್ಯಾಲಯ ಶಾಲೆ:** ಶ್ರೀರಾಮಕೃಷ್ಣ ಮಠವು ನಡೆಸುತ್ತಿರುವ '**ಶ್ರೀ ಶಾರದಾ ವಿದ್ಯಾಲಯ**' ದಲ್ಲಿ **545** (ಗಂಡು ಮಕ್ಕಳು ಹಾಗೂ ಹೆಣ್ಣುಮಕ್ಕಳು) ನರ್ಸರಿ ಹಾಗೂ ಪ್ರಾಥಮಿಕ ದರ್ಜೆಯಲ್ಲಿ ಓದುತ್ತಿದ್ದಾರೆ.

**ಉಚಿತ ತರಬೇತಿ ಕೇಂದ್ರ:** '**ಶಾರದಾ ವಿದ್ಯಾಲಯ**'ದ ಆವರಣದಲ್ಲಿ ಪ್ರತಿದಿನ ಸಾಯಂಕಾಲ ನಾವು ನರ್ಸರಿ ಶಾಲೆಯಲ್ಲಿ ಓದುತ್ತಿರುವ ಹಾಗೂ ಎಲ್ಲ ಹಂತದ ಮಕ್ಕಳಿಗೆ ಉಚಿತ ತರಬೇತಿಯ ತರಗತಿಗಳನ್ನು ನಡೆಸುತ್ತಿದ್ದೇವೆ.

ಸುಮಾರು ೫ ಲಕ್ಷ ರೂ.ಗಳಷ್ಟು ಮೊತ್ತವನ್ನು ಬಡವಿದ್ಯಾರ್ಥಿಗಳ ಉನ್ನತ ಶಿಕ್ಷಣ ವ್ಯಾಸಂಗಕ್ಕಾಗಿ ಸ್ಕಾಲರ್‌ಶಿಪ್‌ಗೋಸ್ಕರ ವಿನಿಯೋಗಿಸ ಲಾಗುವುದು ಎಂದು ನಾವು ತಿಳಿಸಲು ಹರ್ಷಿಸುತ್ತೇವೆ.

### ನಮ್ಮ ಸೇವಾಕಾರ್ಯಕ್ಕಾಗಿ ಹೊಸ ಭವನದ ಆವಶ್ಯಕತೆ

**ನೆಲ ಅಂತಸ್ತು:** ಪ್ರಧಾನ ಆವಶ್ಯಕತೆ ನೆಲ ಅಂತಸ್ತಿನಲ್ಲಿ; ಸಾಯಂಕಾಲ ಎಲ್ಲ ಹಂತಗಳ ವಿದ್ಯಾರ್ಥಿಗಳಿಗೆ ಹಾಗೂ ಬೆಳಿಗ್ಗೆ ಪ್ರಾಥಮಿಕ ತರಗತಿಯ ವಿದ್ಯಾರ್ಥಿಗಳಿಗೆ ಇದು ಸ್ಥಳಾವಕಾಶವನ್ನು ಕಲ್ಪಿಸಿಕೊಡುವುದು. ಉಚಿತ ವೈದ್ಯಕೀಯ ಶಿಬಿರಗಳಿಗೂ ಇದು ಅವಶ್ಯವಾಗಿದೆ. ಆದಕಾರಣ, ನಾವು ೨೫೦೦ ಚದರಡಿಯ ವಿಸ್ತೀರ್ಣವುಳ್ಳ ಬಹೂಪಯೋಗಿ ಕಟ್ಟಡವನ್ನು ನಿರ್ಮಿಸಲು ಯೋಜನೆಯನ್ನು ತಯಾರಿಸಿ ದ್ದೇವೆ. ಈ ಕಟ್ಟಡದ ನಿರ್ಮಾಣಕ್ಕಾಗಿ ೫೫ ಲಕ್ಷ ರೂ.ಗಳ ವೆಚ್ಚ ತಗಲುವುದಾಗಿ ಅಂದಾಜು ಮಾಡಲಾಗಿದೆ. ಇದು ಭಕ್ತಬಾಂಧವರ ಹಾಗೂ ಹಿತೈಷಿಗಳ ಉದಾರ ಧನಸಹಾಯದಿಂದಾಗಿ ಮಾತ್ರವೇ ನಡೆಯಬಹುದಾಗಿದೆ.

### ದೇಣಿಗೆಗೆ ಮನವಿ

ಈ ಯೋಜನೆಯನ್ನು ಯಶಸ್ವಿಯಾಗಿ ಪೂರ್ಣಗೊಳಿಸಲು ನಿಮ್ಮ ಉದಾರ ಹಾಗೂ ದಯಾಪೂರ್ಣವಾದ ನೆರವಿನಲ್ಲಿ ನಮಗೆ ನಂಬುಗೆಯಿದೆ. ಈ ಶೈಕ್ಷಣಿಕ ಸೇವಾಕಾರ್ಯಕ್ಕೆ ನೀವು ಸಲ್ಲಿಸುವ ದಾನ, ದತ್ತಿಗಳು ನಾವು ನಡೆಸುತ್ತಿರುವ ಬಡಜನರ ಕಲ್ಯಾಣದ ಈ ಪಯಣವನ್ನು ಮುಂದುವರಿಸಲು ನೆರವಾಗುವುದು. ಎಲ್ಲ ದಾನ, ದತ್ತಿ, ಕಾಣಿಕೆಗಳು ಅವೆಷ್ಟೇ ಸಣ್ಣದಿರಲಿ, ಕೃತಜ್ಞತಾಪೂರ್ವಕವಾಗಿ ಅವುಗಳನ್ನು ಸ್ಮರಿಸಲಾಗುವುದು. ತಮಗೆ ಒಪ್ಪಿಗೆಯಿದ್ದಲ್ಲಿ, ಒಂದು ಲಕ್ಷ ರೂ. ಹಾಗೂ ಹೆಚ್ಚಿನ ಮೊತ್ತವನ್ನು ದೇಣಿಗೆಯಾಗಿ ನೀಡುವ ದಾನಿ ಗಳ ಹೆಸರನ್ನು ಹೊಸ ಕಟ್ಟಡದಲ್ಲಿ ಅಮೃತಶಿಲೆಯ ಫಲಕಗಳಲ್ಲಿ ಹಾಕಿಸಲಾಗುವುದು.

ದೇಣಿಗೆಗಳನ್ನು ಚೆಕ್, ಡಿಡಿ ಮೂಲಕ '**Ramakrishna Math, Madurai**' ಎಂಬ ಹೆಸರಿನಲ್ಲಿ ತೆಗೆದು, ನಮ್ಮ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿಕೊಡಬೇಕು: Ramakrishna Math, Reserve Lines, New Natham Road, Madurai, Tamil Nadu 625014 Phone: 0452-268 0224 ದೇಣಿಗೆಗಳಿಗೆ ಆದಾಯ ತೆರಿಗೆ ಕಾಯಿದೆಯ 80G ಸೆಕ್ಷನ್ ಅನ್ವಯ ಆದಾಯ ತೆರಿಗೆ ವಿನಾಯಿತಿ ಲಭ್ಯವಿದೆ.

ನಿಮ್ಮೆಲ್ಲರಿಗಾಗಿ ಮದುರೈ ಶ್ರೀ ಮೀನಾಕ್ಷಿದೇವಿ, ಶ್ರೀ ಸುಂದರೇಶ್ವರ ಹಾಗೂ ಶ್ರೀರಾಮಕೃಷ್ಣ, ಶ್ರೀಮಾತೆ ಶಾರದಾದೇವಿ ಹಾಗೂ ಸ್ವಾಮಿ ವಿವೇಕಾನಂದರಿಗೆ ಪ್ರಾರ್ಥನೆಗಳನ್ನು ಸಲ್ಲಿಸುತ್ತೇನೆ. ಮತ್ತೊಮ್ಮೆ ತಮಗೆಲ್ಲರಿಗೂ ನನ್ನ ಪ್ರೀತಿಯ ನಮಸ್ಕಾರಗಳು ಹಾಗೂ ಶುಭಾಶಯಗಳು.

*ಇತಿ ಭಗವತ್ಸೇವೆಯಲ್ಲಿ ತಮ್ಮ,*
**ಸ್ವಾಮಿ ಕಮಲಾತ್ಮಾನಂದ**
ಅಧ್ಯಕ್ಷರು

ಸಂಪಾದಕೀಯ

# ಬೆಳಕ ಬೀರುವ ಹಾದಿ

## ಭಾಗ ೫

ಹಿಂದಿನ ಸಂಚಿಕೆಗಳಲ್ಲಿ ಧರ್ಮದ ಉಗಮ, ವಿಕಸನ, ಅವುಗಳಿಗೆ ಮೂಲವಾದ ದಿವ್ಯಾನುಭವ, ಅಂಥ ಅನುಭವಗಳ ವಾಹಕರಾಗಿ ಉದಿಸಿ ಬಂದ ಮಹಾಪುರುಷರು, ಹಾಗೂ ಇವೆಲ್ಲದರಿಂದ ರೂಪುಗೊಂಡ ಧಾರ್ಮಿಕ –ಆಧ್ಯಾತ್ಮಿಕ ಮಾರ್ಗ ಇವನ್ನು ಕುರಿತು ಚಿಂತಿಸಿದೆವು. ಬೆಳಕಿನ ಮಾರ್ಗದಲ್ಲಿ ನಡೆದ ಹಿಂದಿನ ಮಹಾ ಪುರುಷರ ಸತ್ವವನ್ನೆಲ್ಲ ಮೇಳೈಸಿಕೊಂಡು, ಈ ಕಾಲದ ಅತ್ಯಾಧುನಿಕ ಬದುಕಿಗೂ ಹೊಂದಿಕೆಯಾಗುವಂತೆ ದಿವ್ಯಪಥವನ್ನು ತೋರಿಸಿದ ಶ್ರೀರಾಮಕೃಷ್ಣರ ಜೀವನವು ಮಾನವ ಇತಿಹಾಸವನ್ನೆಲ್ಲ ವ್ಯಾಪಿಸಿ ನಿಂತ ಒಂದು ಮಹಾಕಾವ್ಯದಂತಿದೆ. ಆ ಪವಿತ್ರ ಜೀವನದ ಅವ ಲೋಕನವನ್ನಿಲ್ಲಿ ಮಾಡೋಣ. ಇದು ಕೇವಲ ರಸಾಸ್ವಾದನೆ ಯಲ್ಲ; ಇದೊಂದು 'ದಿವ್ಯರಸಯಾನ'.

### ಆಗಮನದ ಹಿನ್ನೆಲೆ

ಹತ್ತೊಂಬತ್ತನೇ ಶತಮಾನದ ಕೊನೆಯಭಾಗ ಹಲವು ಕಾರಣ ಗಳಿಂದ ನಿರ್ಣಾಯಕವಾಗಿತ್ತು. 'ಸೂರ್ಯ ಮುಳುಗದ ರಾಜ್ಯ' ವೆಂದೇ ಖ್ಯಾತಿ ಹೊಂದಿದ್ದ ಬ್ರಿಟಿಷರ ಆಳ್ವಿಕೆ ಪ್ರಪಂಚದೆಲ್ಲೆಡೆ ವ್ಯಾಪಕ ಪ್ರಭಾವ ಬೀರಿತ್ತು. ವಿಜ್ಞಾನ, ತಂತ್ರಜ್ಞಾನ, ವೈಚಾರಿಕತೆ ಗಳಲ್ಲೆಲ್ಲ ಯೂರೋಪಿನ ಮೇಲುಗೈಯಾದಂತೆ, ಭಾರತದ ಸಾಂಸ್ಕೃತಿಕ–ಸಾಂಪ್ರದಾಯಿಕ ಚಿಂತನಶೈಲಿಗೆ ಮರ್ಮಾಘಾತ ವಾಗುವಂತೆ ಇಲ್ಲಿನ ಸುಶಿಕ್ಷಿತ, ಬೌದ್ಧಿಕ ಸಮಾಜ ಪಾಶ್ಚಾತ್ಯ ಜೀವನ ಕ್ರಮವನ್ನು ಅಂಧವಾಗಿ ಅನುಕರಿಸಹೊರಟಿತ್ತು. ಮತಾಂ ತರ, ರಾಜಕೀಯ ದಬ್ಬಾಳಿಕೆ, ಸಾಂಸ್ಕೃತಿಕ ಅಧಃಪತನ ಇವು ಸದ್ದಿಲ್ಲದೆ ನಡೆದವು. ಬ್ರಿಟಿಷ್ ಶಿಕ್ಷಣದ ಕ್ರಮದ ಹೇರಿಕೆಯಿಂದ ಭಾರತೀಯವಾದದ್ದನ್ನೆಲ್ಲ ತಿರಸ್ಕರಿಸುವ ಮನೋಭಾವವನ್ನು ಹಬ್ಬಿಸಲಾಯಿತು. ಈ ದೇಶದಲ್ಲಿ ಇಲ್ಲಿನ ಧರ್ಮ, ಸಂಸ್ಕೃತಿ ಇನ್ನೇನು ಸಂಪೂರ್ಣವಾಗಿ ನಶಿಸಿ ಹೋದಂತೆಯೇ – ಎನ್ನುವಷ್ಟ ರಲ್ಲಿ ಒಂದು ಮಹತ್ತರ ಬದಲಾವಣೆಯುಂಟಾಯಿತು. ಹಲವೆಡೆ ಧಾರ್ಮಿಕ ಮಹಾಪುರುಷರ ಉದಯ, ಭಾರತೀಯ ಚಿಂತನೆಯ ಪುನರುಜ್ಜೀವನ, ರಾಷ್ಟ್ರೀಯ ಪ್ರಜ್ಞೆ, ಬೌದ್ಧಿಕ–ಸಾಮಾಜಿಕ– ರಾಜ ಕೀಯ ಸ್ವಾತಂತ್ರ್ಯದ ಹಾರೈಕೆ ಎಲ್ಲೆಡೆ ಕಾಡ್ಗಿಚ್ಚಿನಂತೆ ಹಬ್ಬಿತು. ಈ ಬದಲಾವಣೆಯ ಹಿನ್ನೆಲೆಯಲ್ಲಿ, ಎಲ್ಲ ಆಗುಹೋಗುಗಳ ಹಿಂದೆ ಮರೆಯಾಗಿ, ಮೌನವಾಗಿ ಬೆಳಗಿದ ಒಂದು ಮಹಾನ್ ಆಧ್ಯಾತ್ಮಿಕ ಜ್ಯೋತಿಯೇ ಶ್ರೀರಾಮಕೃಷ್ಣರು.

### ಅವತಾರ ವರಿಷ್ಠರು

ಮತ್ತೆ ಸ್ವಾಮೀಜಿ ರಚಿಸಿದ 'ಸ್ಥಾಪಕಾಯ ಚ ಧರ್ಮಸ್ಯ..' ಸ್ತೋತ್ರಕ್ಕೆ ಬರೋಣ. ಒಂದು ಯುಗದ ಪ್ರಯೋಜನಕ್ಕಾಗಿ, ಜಡತೆ–ಅಂಧಕಾರಗಳಿಂದ ಭೋಗಜೀವನದತ್ತ ಹೊರಳುವ ಸಮಾಜದಲ್ಲಿ ಹೊಸ ಅರಿವಿನ ಪ್ರಕಾಶವನ್ನು ನೀಡುವ ಉದ್ದೇಶ ಕ್ಕಾಗಿ ಮಾನವನಾಗಿ ಜನ್ಮವೆತ್ತಿ ಬರುವುದೇ ಅವತಾರದ ಉದ್ದೇಶ. ಆಯಾ ಕಾಲ, ದೇಶದ ಸಂದರ್ಭಕ್ಕೆ ತಕ್ಕಂತೆ, ಸನ್ನಿವೇಶದ ಅಗತ್ಯ ಕ್ಕನುಗುಣವಾಗಿ ವಿವಿಧ ಗುಣ, ಸ್ವಭಾವಗಳಿಂದ ಆ ವ್ಯಕ್ತಿ ಸಂಪನ್ನ ನಾಗಿದ್ದರೂ, ಪ್ರಾಂತ, ಜಾತಿ, ಪರಿಸರಗಳ ಮಿತಿಯನ್ನು ಮೀರಿ, ತನ್ನ ಪ್ರಭಾವವನ್ನು ವಿಶ್ವವಿಶಾಲವಾಗಿ ಬೀರುವುದು ಅವರ ಸ್ವಭಾವ ವಾಗಿರುತ್ತದೆ. ಈ ದೃಷ್ಟಿಯಿಂದ ನೋಡುವಾಗ, ಶ್ರೀರಾಮಕೃಷ್ಣ ರಲ್ಲಿ ಅಡಕವಾಗಿದ್ದ ದಿವ್ಯಸ್ವಭಾವ ಹಿಂದಿನ ಎಲ್ಲ ಅವತಾರಗಳಿಗಿಂತ ಹೆಚ್ಚಿನದಾಗಿತ್ತು; ಇಡೀ ವಿಶ್ವದ ಸಮಸ್ತ ಮನುಕುಲವನ್ನೂ ಒಳ ಗೊಳ್ಳುವ ಆಧ್ಯಾತ್ಮಿಕ ಪ್ರಭೆ ಅವರಿಂದ ಹೊರಹೊಮ್ಮಿತು. ಅವರ ಜೀವಿತಕಾಲದಲ್ಲಿ ಅದಿನ್ನೂ ಆರಂಭವಾಗಿತ್ತಷ್ಟೆ; ಆದರೆ ಅದರ ಪ್ರಭೆ ಜಗತ್ತನ್ನೆಲ್ಲ ವ್ಯಾಪಿಸುವ ಲಕ್ಷಣವನ್ನು ಸ್ವಾಮಿ ವಿವೇಕಾ ನಂದರು ಸ್ಪಷ್ಟವಾಗಿ ಕಂಡಿದ್ದರು. ಕೃಷ್ಣ, ಬುದ್ಧ, ಕ್ರೈಸ್ತ ಮೊದಲಾ ದವರು ಒಂದೊಂದು ಭೌಗೋಳಿಕ ವಲಯದ ಅಥವಾ ಧಾರ್ಮಿಕ ವಲಯದ ಒಳಗೆ ದಿವ್ಯಪ್ರಭೆಯನ್ನು ಬೀರಿದರು; ಶ್ರೀರಾಮ ಕೃಷ್ಣರು ಎಲ್ಲ ಧರ್ಮಗಳ ಹಾಗೂ ಎಲ್ಲ ಭೌಗೋಳಿಕ ವಲಯದ ಚೌಕಟ್ಟನ್ನು ಮೀರಿ ತಮ್ಮ ಆಧ್ಯಾತ್ಮಿಕತೆಯನ್ನು ಹರಡಿದರು. ಹಾಗಿ ದ್ದರೆ ಇನ್ನೂ ಅವರ ಜೀವನ, ಆದರ್ಶ, ಪ್ರಭಾವ ಪ್ರಪಂಚದ ಎಲ್ಲೆಡೆ ಜನಜೀವನದಲ್ಲಿ ಕಾಣುತ್ತಿಲ್ಲವಲ್ಲ; 'ಅವತಾರ ವರಿಷ್ಠರು'

ಎಂಬ ಮಾತು ಕೇವಲ ಸ್ತುತಿಯಷ್ಟೇ ಆಗದೆ? — ಈ ಪ್ರಶ್ನೆ ಇಲ್ಲಿ ಮೂಡಬಹುದು. 'ಶ್ರೀರಾಮಕೃಷ್ಣರ ಆಗಮನದೊಂದಿಗೆ ಸತ್ಯಯುಗ ಆರಂಭವಾಯಿತು' ಎಂದಿದ್ದರು ಸ್ವಾಮೀಜಿ. ಈ ಮಾತನ್ನು ಕುರಿತು ಕೆಲವರು ಆಕ್ಷೇಪಿಸಿದರು, 'ಹಾಗಿದ್ದರೆ ಅದು ಎಲ್ಲೂ ಸ್ಪಷ್ಟವಾಗಿ ಗೋಚರಿಸುತ್ತಿಲ್ಲವಲ್ಲ, ಸ್ವಾಮೀಜಿ?' ಎಂದು. ಸ್ವಾಮೀಜಿ ಹೀಗೆ ಉತ್ತರಿಸಿದರು – 'ಇನ್ನೂ ಆರಂಭವಾಗಿದೆ, ಅಷ್ಟೇ. ಕ್ರಮೇಣ ಈ ಬೆಳಕು ಎಲ್ಲವನ್ನೂ ವ್ಯಾಪಿಸುವುದು.' ಮೇಲಿನ ಆಕ್ಷೇಪಣೆಗೂ ಈ ಮಾತನ್ನೇ ಅನ್ವಯಿಸಬೇಕು. ಆಧ್ಯಾತ್ಮಿಕ ಪ್ರಭಾವ ಹರಡುವುದು ನಿಧಾನ; ಅದರಲ್ಲೂ ಅನುಭವಗಳ ಆಧಾರದ ಮೇಲೆ ನಿಂತ ಆಧ್ಯಾತ್ಮಿಕ, ಧಾರ್ಮಿಕ ಭಾವನೆಗಳು ಬೌದ್ಧಿಕ, ವೈಚಾರಿಕ ಘರ್ಷಣೆಯ ಪರೀಕ್ಷೆಯಲ್ಲಿ ಗೆದ್ದು ಮುನ್ನುಗ್ಗುವುದು ತುಂಬ ನಿಧಾನ. ಶ್ರೀರಾಮಕೃಷ್ಣರ ದಿವ್ಯಜೀವನ ಹಾಗೂ ಆದರ್ಶಗಳ ಬೆಳಕಿನಲ್ಲಿ ಸನಾತನ ಧರ್ಮದ ತತ್ತ್ವಗಳನ್ನು ಪ್ರಪಂಚದಾದ್ಯಂತ ಹರಡುವಲ್ಲಿ ಸ್ವಾಮಿ ವಿವೇಕಾನಂದರು ಪ್ರಮುಖ ಸಲಕರಣೆಯಾಗಿದ್ದರು. ಪ್ರಾಚ್ಯ-ಪಾಶ್ಚಾತ್ಯ ದೇಶಗಳ ಬೌದ್ಧಿಕ ವಲಯದಲ್ಲಿ ಶ್ರೀರಾಮಕೃಷ್ಣರ ಹಾಗೂ ವೇದಾಂತದ ಆದರ್ಶಗಳು ಪ್ರವೇಶಿಸುವುದರಲ್ಲಿ ಅವರ ಪಾತ್ರ ಹಿರಿದು. ಈ ಕಾರ್ಯ ಇನ್ನಷ್ಟು ಮುಂದುವರಿಯುತ್ತಿದೆ. ಸ್ವಾಮೀಜಿ ಹೇಳುವಂತೆ, 'ಶ್ರೀರಾಮಕೃಷ್ಣರು ಒಂದು ಸಾವಿರ ವರ್ಷಗಳ ಆಧ್ಯಾತ್ಮಿಕ ಬದುಕನ್ನು ಈ ಒಂದು ಜನ್ಮದಲ್ಲಿ ಪೂರೈಸಿದರು.' ಅವರ ಪ್ರಭಾವ 'ಸಾವಿರದ ಐನೂರು ವರ್ಷಗಳವರೆಗೂ ಪ್ರಪಂಚದಲ್ಲಿ ಸ್ಫೂರ್ತಿ ನೀಡುವುದು.' ಮಾನವ ಜನಾಂಗದಲ್ಲಿ ಉದಿಸಿದ ಧಾರ್ಮಿಕ ಭಾವನೆ ವಿವಿಧ ನದಿ, ಉಪನದಿಗಳಾಗಿ ಮುಂದಕ್ಕೆ ಹರಿಯುತ್ತ ಬಂದು, ಶ್ರೀರಾಮಕೃಷ್ಣರ 'ಸರ್ವಧರ್ಮಸಮನ್ವಯ'ದ ಆದರ್ಶ ಹಾಗೂ ಸ್ವಾಮಿ ವಿವೇಕಾನಂದರ 'ವಿಶ್ವಧರ್ಮ'ದ ಆದರ್ಶವೆಂಬ ಸಾಗರದಲ್ಲಿ ಒಂದಾಗುವುದನ್ನು ನಾವಿಲ್ಲಿ ಗಮನಿಸಬಹುದು.

### ಪ್ರಪಂಚದ ಹೊಸ ಸನ್ನಿವೇಶ

ಇಂದಿನ ಪರಿಸ್ಥಿತಿಯಲ್ಲಿ ಶ್ರೀರಾಮಕೃಷ್ಣರ ಭಾವ, ಆದರ್ಶಗಳು ಹೇಗೆ ಪ್ರಸ್ತುತವಾಗುತ್ತವೆ? ಇದಕ್ಕೆ ಉತ್ತರವಾಗಿ ಈ ಕೆಲವು ಅಂಶಗಳನ್ನು ಪಟ್ಟಿ ಮಾಡೋಣ: ೧) ಇಂದಿನ ಜಗತ್ತು ಪ್ರತಿಯೊಂದನ್ನೂ ಅನುಭವದ ಒರೆಗೆ ಹಚ್ಚಿ , ವೈಜ್ಞಾನಿಕ ಪರೀಕ್ಷೆಗೆ ಒಳಪಡಿಸಿ ಸ್ವೀಕರಿಸಬೇಕೆಂಬ ಅನಿವಾರ್ಯತೆಗೆ ಒಳಗಾಗಿದೆ. ಶ್ರೀರಾಮಕೃಷ್ಣರ ಜೀವನ ಹಾಗೂ ತತ್ತ್ವಗಳು ಈ ಮನೋಭಾವವನ್ನು ಒಪ್ಪುತ್ತದೆ. 'ಹಗಲು, ರಾತ್ರಿ ಕೂಡ ಸಂನ್ಯಾಸಿಯನ್ನು ಪರೀಕ್ಷಿಸಿ ನೋಡಬೇಕು' ಎನ್ನುತ್ತಿದ್ದರು ಅವರು. ೨) ತತ್ತ್ವವಾಗಿರಲಿ, ಧಾರ್ಮಿಕ ಆಚರಣೆಯಾಗಿರಲಿ – ಗುರಿಯತ್ತ ಕರೆದೊಯ್ಯುವ ಸುಲಭ ಹಾಗೂ ಸರಳ ವಿಧಾನವನ್ನು ಅನುಸರಿಸುವುದು ಮುಖ್ಯ ಎನ್ನುತ್ತಿದ್ದರು ಶ್ರೀರಾಮಕೃಷ್ಣರು. ಇಂದಿನ ಒತ್ತಡದ, ಅವಸರದ ಹಾಗೂ ಸಂಕೀರ್ಣ ಸಮಾಜದಲ್ಲಿ ಈ ಭಾವನೆ ಅತ್ಯಂತ ಸ್ವೀಕಾರಾರ್ಹವಾಗಿದೆ. 'ಭಕ್ತಿಯೋಗವೇ ಕಲಿಯುಗಕ್ಕೆ ಅತ್ಯುತ್ತಮ' ಎಂದರು ಶ್ರೀರಾಮಕೃಷ್ಣರು. ಏಕೆಂದರೆ ಅದು ಸರ್ವರಿಗೂ ಸಹಜ ಹಾಗೂ ಸುಲಭ. ಅಂತೆಯೇ, ಭಗವನ್ನಾಮ ಸ್ಮರಣೆ, ನಾಮಜಪ, ಭಗವಲ್ಲೀಲೆಯ ಚಿಂತನೆ, ಭಜನೆಗಳನ್ನು ಭಾವಪೂರ್ಣವಾಗಿ ಹಾಡುವುದರ ಮಹತ್ವವನ್ನು ಅವರು ಸಾರಿದರು. ಜೊಳ್ಳಿಗಿಂತ ಕಾಳು ಮುಖ್ಯ; ತೆಂಗಿನ ಕರಟಕ್ಕಿಂತ ಅದರ ತಿರುಳು ಮುಖ್ಯ. ಅಂತೆಯೇ ಧರ್ಮದ ಸಾರವಾದ ಭಕ್ತಿ, ಜ್ಞಾನ, ವೈರಾಗ್ಯಗಳು ಮುಖ್ಯವೇ ಹೊರತು ಆಚರಣೆ, ಶಾಸ್ತ್ರಗಳಲ್ಲ ಎಂದರು ಶ್ರೀರಾಮಕೃಷ್ಣರು. ೩) ಇಂದಿನ ಮಾನವನು ಜಾಗತಿಕ ದೃಷ್ಟಿ ಹಾಗೂ ವಿಶ್ವವಿಶಾಲ ದೃಷ್ಟಿಕೋನವನ್ನು ಹೆಚ್ಚು ಹೆಚ್ಚು ಬಯಸುತ್ತಾನೆ. ಜಾಗತಿಕ ಮಾರುಕಟ್ಟೆ, ದೇಶ-ದೇಶಗಳ ನಡುವಿನ ಬಾಂಧವ್ಯ, ಸಾಂಸ್ಕೃತಿಕ ವಿನಿಮಯ ಇತ್ಯಾದಿಗಳಿಗೆ ಆದ್ಯತೆ ಹೆಚ್ಚಿವೆ. ಶ್ರೀರಾಮಕೃಷ್ಣರ ಸಮನ್ವಯ ಭಾವ, ಸರ್ವಮತಗಳ ಸ್ವೀಕಾರ ಹಾಗೂ 'ಎಲ್ಲರಿಗೂ ಸಾಕ್ಷಾತ್ಕಾರ ಸಾಧ್ಯವಿದೆ' ಎಂಬ ಭಾವನೆಗಳು ಈ ಕಾರಣದಿಂದ ಇನ್ನಷ್ಟು ಪ್ರಸ್ತುತವೆನಿಸುತ್ತವೆ. ೪) ಭೌತಿಕವಾದ, ಇಂದ್ರಿಯಲೋಲುಪತೆ, ಉಗ್ರವಾದಿ ಚಟುವಟಿಕೆ, ಮಾದಕದ್ರವ್ಯಗಳ ಜಾಲ, ಆರ್ಥಿಕ ಪ್ರಗತಿಯ ಪೈಪೋಟಿ, ವೈಜ್ಞಾನಿಕ ತಂತ್ರಜ್ಞಾನಗಳ ದುರ್ಬಳಕೆ – ಇಂಥ ಪಿಡುಗುಗಳ ಮೂಲಕ ನೈತಿಕ ಪ್ರಜ್ಞೆಯ ತರಬೇತಿ ಸಮರ್ಪಕವಾಗಿಲ್ಲ. ಶೈಕ್ಷಣಿಕ ವ್ಯವಸ್ಥೆಯಲ್ಲಿ ಅಳವಡಿಸಬೇಕಾದ ನೈತಿಕ ಶಿಸ್ತು, ನೈತಿಕ ಜೀವನಗಳಿಗೆ ಪ್ರೇರಣೆಯನ್ನು ಶ್ರೀರಾಮಕೃಷ್ಣರ ಜೀವನ, ಸಂದೇಶಗಳು ಸಮರ್ಥವಾಗಿ ನೀಡಬಲ್ಲವು. 'ನಿಜವಾದ ವಿದ್ಯೆಯೆಂದರೆ ಅಕ್ಷರಾಭ್ಯಾಸವಲ್ಲ, ಅದು ಆಂತರಿಕ ಅರಿವು ಹಾಗೂ ವಿವೇಕ' ಎಂಬುದನ್ನು ಸಾರಿದರು ಶ್ರೀರಾಮಕೃಷ್ಣರು. ಈ ಕಾರಣಕ್ಕಾಗಿ 'ಅನ್ನ ನೀಡುವ ವಿದ್ಯೆ ನನಗೆ ಬೇಡ' ಎಂದು ಸ್ವತಃ ತಾವೇ ವಿದ್ಯಾಭ್ಯಾಸವನ್ನು ನಿಲ್ಲಿಸಿದರು. ೫) ಎಲ್ಲ ಕಾಲದಲ್ಲಿ, ಎಲ್ಲ ದೇಶಗಳೂ ಸ್ವೀಕರಿಸುವ ಒಂದೇ ತತ್ತ್ವವೆಂದರೆ 'ಸತ್ಯ.' ಶ್ರೀರಾಮಕೃಷ್ಣರು ಸತ್ಯದಲ್ಲಿ ಪ್ರತಿಷ್ಠಿತರಾಗಿದ್ದರು, ಸತ್ಯದಲ್ಲಿ ಒಂದಾಗಿದ್ದರು. ತಾವು ಕಂಡದ್ದನ್ನಲ್ಲದೆ ಬೇರೇನನ್ನೂ ಅವರು ಉಪದೇಶಿಸಲಿಲ್ಲ. ತ್ಯಾಗ, ದಯೆ, ವೈರಾಗ್ಯ, ಭಕ್ತಿ, ವಿವೇಕವೇ ಮೊದಲಾದ ಉನ್ನತ ಮೌಲ್ಯಗಳೆಲ್ಲ ಈ ತತ್ತ್ವವನ್ನೇ ಆಧರಿಸಿದವು. ಪ್ರಾಚೀನ ಕಾಲದಲ್ಲಿ ಇದು ಹೇಗೆ ಅತ್ಯುತ್ತಮ ಮೌಲ್ಯವಾಗಿತ್ತೋ, ಅದೇ ರೀತಿ ಇಂದಿಗೂ, ಮುಂದೆ ಕೂಡ ಆಗಿರುತ್ತದೆ ಎಂಬುದನ್ನು ನಾವು ಶ್ರೀರಾಮಕೃಷ್ಣರ ಜೀವನದಲ್ಲಿ ಕಂಡುಕೊಳ್ಳಬಹುದು. ಹೀಗೆ ಆಧುನಿಕ ಜಗತ್ತು ಶ್ರೀರಾಮಕೃಷ್ಣರ ಜೀವನ, ಆದರ್ಶಗಳ ಅನುಸರಣೆಯಿಂದ ಪರಿಪೂರ್ಣತೆಯತ್ತ ಮುನ್ನಡೆಯಬಹುದು.

### ದಿವ್ಯಾನಂದದ ದೇಗುಲ

ಕೇವಲ ಇವಷ್ಟೇ ಅಲ್ಲ , ಶ್ರೀರಾಮಕೃಷ್ಣರು ಆಧ್ಯಾತ್ಮಿಕತೆಯ ಇನ್ನೊಂದು ಮುಖವನ್ನು ಆಧುನಿಕ ಜಗತ್ತಿಗೆ ಪ್ರಕಟಗೊಳಿಸುತ್ತಾರೆ. ಅದೇ, ಆತ್ಮನ ಆನಂದಸ್ವರೂಪ. ಧರ್ಮ, ಅಧ್ಯಾತ್ಮವೆಂದರೆ ಅದು ನಿರಾಶಾವಾದಿಗಳ ನೆಲೆಯೆಂಬ ಅಭಿಪ್ರಾಯ ಹಲವರದು.

ಜಗತ್ತಿನ ಸುಖದಿಂದ ಯಾರು ವಂಚಿತರೋ ಅವರು ಮಾತ್ರ ಬಂದು ಸೇರುವ ತಾಣ ಇದೆಂಬ ತಪ್ಪುಕಲ್ಪನೆ ಇಂದಿಗೂ ಹಲವರಲ್ಲಿದೆ – ವಿಶೇಷವಾಗಿ ನಗರಜೀವನಕ್ಕೆ ಮಾರುಹೋದ ಯುವಕರಲ್ಲಿ. ಪ್ರಾಚೀನ ಗ್ರಂಥಗಳಲ್ಲೂ, ಸಾಧುಸಂತರ ಜೀವನಚರಿತ್ರೆಗಳಲ್ಲೂ ಇದಕ್ಕೆ ವಿರುದ್ಧವಾದ ಚಿತ್ರಣ ಕಂಡುಬರುತ್ತದೆ. ಈ ಎಲ್ಲ ವಿವರಣೆಗಳಿಗಿಂತಲೂ, ಶ್ರೀರಾಮಕೃಷ್ಣರ ಜೀವನದಲ್ಲಿ ಈ ದೈವೀ ಆನಂದ ಕಂಡುಬರುವ ಬಗೆ ತುಂಬ ಭಿನ್ನ. ಅವರ ಜೀವನದ ಪ್ರತಿ ಕ್ಷಣದಲ್ಲೂ ಈ ಲೋಕವನ್ನು ಮೀರಿದ ಶುದ್ಧ ಆನಂದದ ಉನ್ಮಾದವಿದೆ; ಕೇವಲ ದೇವರ ಹೆಸರನ್ನು ಕೇಳಿದ ಕೂಡಲೇ ಸಮಾಧಿಯ ಸ್ಥಿತಿಗೇರಿ, ದೇಹಭಾವವನ್ನು ಮರೆತುಬಿಡುವ ದಿವ್ಯತೆಯ ಹುಚ್ಚು ಹೊಳೆಯ ಚಿತ್ರವಿದೆ. ಅವರದೇ ಉಪದೇಶ ಈ ಅವಸ್ಥೆಯನ್ನು ಕುರಿತು ಹೇಳುತ್ತದೆ: ''ಯಾವಾಗ ನಿಮಗೆ ಹರಿನಾಮವನ್ನೋ ರಾಮನಾಮವನ್ನೋ ಒಮ್ಮೆ ಉಚ್ಚರಿಸಿದ ಮಾತ್ರದಿಂದಲೇ ರೋಮಾಂಚನವಾಗುವುದೋ, ಆಗ ನಿಜವಾಗಿ ತಿಳಿದುಕೊಳ್ಳಿ, ಇನ್ನು ನೀವು ಸಂಧ್ಯಾದಿ ಕರ್ಮಗಳನ್ನು ಮಾಡಬೇಕಾಗಿಲ್ಲ — ಎಂದು.'' *(ಶ್ರೀರಾಮಕೃಷ್ಣ ವಚನವೇದ, ಭಾಗ ೧, ಪು.೧)* ಈ ಗ್ರಂಥದುದ್ದಕ್ಕೂ ಶ್ರೀರಾಮಕೃಷ್ಣರ ಇಂತಹ ಉಪದೇಶ, ಮಾತುಕತೆ, ಸಮಾಧಿ, ಹಾಡು–ನರ್ತನಗಳು ತುಂಬಿ ತುಳುಕಾಡುತ್ತಿವೆ. ಅವತಾರಪುರುಷನ ಈ ಕಥಾನಕ ಹಾಗೂ ಮಾತುಗಳನ್ನು ಓದಿದವರ ಮೈಮನಗಳು ಪುಳಕಗೊಳ್ಳುತ್ತವೆ; ದಿವ್ಯ ಆನಂದದ ಸ್ಪರ್ಶವನ್ನು ಹೊಂದಿ ಅರೆಕ್ಷಣವಾದರೂ ಮೈಮರೆಯುತ್ತವೆ. ರಾಷ್ಟ್ರಕವಿ ಕುವೆಂಪು ಅವರು ಈ ಕೃತಿಯ ಮುನ್ನುಡಿಯಲ್ಲಿ ಬರೆದಿರುವ ಈ ಮಾತುಗಳು ಇಲ್ಲಿ ಸ್ಮರಣಾರ್ಹ: '' 'ಶ್ರೀರಾಮಕೃಷ್ಣ ವಚನವೇದ'ವೆಂದರೆ ಅದೊಂದು ಕರತಲ ದೇವಸ್ಥಾನ, ಕರತಲ ತಪೋರಂಗ, ಕರತಲ ಪುಣ್ಯಕ್ಷೇತ್ರ. ಆದರೆ ದೇವಸ್ಥಾನ ಪುಣ್ಯಕ್ಷೇತ್ರಗಳಂತೆ ತಾನೆಂದಿಗೂ ಕಲುಷಿತವಾಗುವ ಸಂಭವವಿಲ್ಲ, ಶಿಥಿಲವಾಗುವ ಸಂಭವವಿಲ್ಲ. ಯಾವ ಮನೆಯಲ್ಲಿ ಈ 'ವಚನವೇದ' ಇರುತ್ತದೆಯೊ ಅದು ಮಂದಿರವಾಗುತ್ತದೆ. ಯಾರ ಕೈ ಇದನ್ನು ಹಿಡಿದಿರುತ್ತದೆಯೊ ಅದು ಭಗವಂತನ ಪಾದಾರವಿಂದವನ್ನೇ ಹಿಡಿದಿರುತ್ತದೆ. ಯಾರ ಜಿಹ್ವೆ ಇದನ್ನು ಪಠಿಸುತ್ತದೆಯೊ ಅದು ಭಗವಂತನ ಅಮೃತವನ್ನೇ ಈಂಟುತ್ತಿರುತ್ತದೆ. ಇದು ಆನಂದದ ಆಗರ; ಶಾಂತಿಯ ಸಾಗರ; ದಿವ್ಯ ಜ್ಞಾನದ ಓಗರ. ಕಷ್ಟದ ಸಮಯದಲ್ಲಿ ಧೈರ್ಯವೀಯುವ ಸಖ; ಸುಖದ ಸಮಯದಲ್ಲಿ ಸಮರ್ಪಣ ಭಾವವಿತ್ತು ವಿನಯ ಭಕ್ತಿಗಳನ್ನು ಪ್ರಚೋದಿಸುವ ಗುರು; ಕತ್ತಲಲ್ಲಿ ದೀಪ; ದಾರಿಗೆ ಊರುಗೋಲು. ದಿಕ್ಕುಗೆಡದಂತೆ ಗುರಿ ತೋರುವ ಧ್ರುವತಾರೆ.'' *(ಅಲ್ಲೇ, ಪು. viii)*

### ಬೆಳಕ ಬೀರುವ ಹಾದಿ

ಜಗತ್ತಿನಲ್ಲಿ ಜೀವವಿರುವ ಪ್ರತಿಯೊಂದೂ ಬೆಳಕಿನತ್ತ ಮುಖ ಮಾಡುವುದು. ಕೇವಲ ಸೂರ್ಯಕಾಂತಿಯ ಹೂವೊಂದೇ ಅಲ್ಲ; ಸಕಲ ಚರಾಚರಗಳೂ, ಸಸ್ಯ–ಪ್ರಾಣಿ–ಪಕ್ಷಿ–ಜೀವಿಗಳೂ ಬೆಳಕನ್ನೇ ಹಿಂಬಾಲಿಸಿ ಹೋಗುವುವು; ಕತ್ತಲಲ್ಲೂ ಬೆಳಕನ್ನೇ ಅವಲಂಬಿಸಿ ಬದುಕುವುವು. ಮನಸ್ಸು, ಬುದ್ಧಿಗಳು ವಿಕಾಸಗೊಂಡ ಮಾನವನ ಪಾಲಿಗೆ ಅರಿವೇ ಬೆಳಕು; ಅಜ್ಞಾನವೇ ಕತ್ತಲು. ಪ್ರಸ್ತುತ ಜಗತ್ತಿನಲ್ಲೂ ಇದನ್ನೇ ನೋಡುತ್ತೇವೆ — ಸಮಸ್ತ ಮನುಕುಲ ಅರಿವಿನ ಕಡೆಗೇ ಸಾಗುತ್ತಿದೆ. ಈ ಯಾನಕ್ಕೆ ಕೊನೆಯೆಲ್ಲಿ? ಉಳಿದಿರುವ ದಾರಿಯೆಷ್ಟು? ಕ್ರಮಿಸಿ ಬಂದಿರುವ ಹೆಜ್ಜೆಗಳೆಷ್ಟು? ನಮ್ಮ ನಮ್ಮ ಸಾಮರ್ಥ್ಯಕ್ಕೆ ತಕ್ಕಂತೆ ಇದನ್ನು ನಾವು ಅರ್ಥ ಮಾಡಿಕೊಳ್ಳುತ್ತೇವೆ. ಕೇವಲ 'ಇಷ್ಟೇ ಸಾಕು', 'ಇದರಾಚೆಗೆ ಇನ್ನೇನೂ ಇಲ್ಲ' ಎಂದು ತೀರ್ಮಾನಿಸಿಬಿಡುವ ಅಲ್ಪತೃಪ್ತರು ಒಂದೆಡೆ ನಿಲ್ಲುತ್ತಾರೆ; ಅದರಾಚೆಗೆ ಇನ್ನೇನನ್ನೂ ಕಾಣದೆ ಹೋಗುತ್ತಾರೆ. ಆದರೆ ಭಾರತೀಯ ಮನಸ್ಸಿನ ಲಕ್ಷಣ ಇದಲ್ಲ ; ಪ್ರಾಚೀನ ಕಾಲದಿಂದಲೂ ಅದು 'ಧೀರ' ಮನಸ್ಸು — ಅಂದರೆ ಬುದ್ಧಿಯ ವಿಕಾಸಕ್ಕೆ ತನ್ನನ್ನು ತಾನು ತೆರೆದುಕೊಂಡ ಮನಸ್ಸು. ಭೌತಿಕ ಪ್ರಪಂಚದ ಜ್ಞಾನ ಕೇವಲ ಸೀಮಿತವೆಂಬ ಸತ್ಯವನ್ನು ಸಾವಿರಾರು ವರ್ಷಗಳ ಹಿಂದೆಯೇ ಅದು ಅರಿತುಕೊಂಡಿತು. **'ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷತ್ ಆವೃತ್ತ ಚಕ್ಷುಃ ಅಮೃತತ್ವಮಿಚ್ಛನ್'** (ಅಮೃತತ್ವವನ್ನು ಬಯಸುವ ಕೆಲವು ಬುದ್ಧಿವಂತರು ಮಾತ್ರ ತಮ್ಮ ದೃಷ್ಟಿಯನ್ನು ಒಳಕ್ಕೆ ತಿರುಗಿಸಿ, ತನ್ನೊಳಗಿರುವ ಆತ್ಮವನ್ನು ನೋಡುತ್ತಾರೆ) ಎನ್ನುತ್ತದೆ ಕಠೋಪನಿಷತ್ತು.*(೨.೧.೧)* ಆದರೆ ಹೀಗೆ ಕಂಡುಕೊಂಡ ಅಂತರಾತ್ಮನನ್ನು ಇತರರಿಗೂ ಸಾರಿ ಹೇಳುತ್ತ, 'ಇದು ಸತ್ಯದ ದಾರಿ. ಇಲ್ಲಿದೆ ಎಲ್ಲ ಸಮಸ್ಯೆಗಳಿಗೂ ಪರಿಹಾರ. ಈ ಆತ್ಮನನ್ನು ಅರಿತು ಮುಕ್ತರಾಗಿ' ಎಂದು ಅದನ್ನು ಅರಿಯುವ ಮಾರ್ಗವನ್ನು ಎಲ್ಲರಿಗೂ ತಿಳಿಸಿಕೊಟ್ಟದ್ದೇ ಆಧ್ಯಾತ್ಮಿಕ ಪಥವಾಗಿ ರೂಪುಗೊಂಡಿತು. ಇದು ಒಂದೆರಡು ದಿನದ, ವರ್ಷಗಳ ಕಥೆಯಲ್ಲ; ಸಹಸ್ರಾರು ವರ್ಷಗಳ ಅವಧಿಯಲ್ಲಿ ರೂಪುಗೊಂಡ ಮಾರ್ಗ. ಈ ಮಾರ್ಗವೇ ಬೆಳಕನ್ನು ನೀಡುವ ಹಾದಿ; ಸನಾತನ ಧರ್ಮದ ಮಾರ್ಗ. ಈ ದೀರ್ಘ ಅವಧಿಯಲ್ಲಿ ಹಲವು ಮಂದಿ 'ಧೀರ'ರು ಬಂದರು; ಸತ್ಯಸಾಕ್ಷಾತ್ಕಾರ ಮಾಡಿಕೊಂಡರು. ಹಿಂದಿನವರ ಮಾತುಗಳು ಸತ್ಯವೆಂಬುದನ್ನು ಒರೆಗೆ ಹಚ್ಚಿದರು. ದಿವ್ಯ ಪಥಕ್ಕೆ ತಮ್ಮದೇ ಆದ ಹೊಸ ಕೊಡುಗೆಯನ್ನು ಕೊಟ್ಟರು; ಅಗತ್ಯವಿದ್ದಲ್ಲಿ ದಾರಿಯನ್ನು ಸರಿಪಡಿಸಿದರು. ಅಂಥ ದಿವ್ಯ ಪಥದಲ್ಲಿ ಗೋಚರಿಸಿ ಬಂದ ಸೂರ್ಯನೇ ಅವತಾರಪುರುಷ; ಅವನ ಬೆಳಕಿನಲ್ಲಿ ಸಾವಿರಾರು ಮಂದಿ ಮಿಂದರು; ಅಮೃತದ ಪ್ರವಾಹದಲ್ಲಿ ತೇಲಾಡಿದರು. ಇಂಥ ಅವತಾರ ಪುರುಷರಲ್ಲೆಲ್ಲ ಶ್ರೇಷ್ಠರಾದ ಶ್ರೀರಾಮಕೃಷ್ಣರನ್ನು ಕುರಿತು ಇನ್ನೊಬ್ಬ ಮಹಾಚೇತನ, ಸ್ವಾಮಿ ವಿವೇಕಾನಂದರು,

**'ಸ್ಥಾಪಕಾಯ ಚ ಧರ್ಮಸ್ಯ ಸರ್ವಧರ್ಮ ಸ್ವರೂಪಿಣೇ ।**
**ಅವತಾರ ವರಿಷ್ಠಾಯ ರಾಮಕೃಷ್ಣಾಯ ತೇ ನಮಃ॥'**

— ಎಂದು ಸ್ತುತಿಸಿರುವುದು ಅದೆಂಥ ಅಚ್ಚರಿಯ, ಅಮೋಘವಾದ ಹಾಗೂ ಅರ್ಥಭರಿತವಾದ ಪ್ರಾರ್ಥನೆಯಾಗಿದೆ!

*(ಸಮಾಪ್ತಿ)*

# ರಾಮಾವತಾರ



✸ ರಾಮ ಪೂರ್ಣಬ್ರಹ್ಮ, ಪೂರ್ಣ ಅವತಾರ ಎಂಬುದು ಕೇವಲ ಹನ್ನೆರಡು ಜನ ಋಷಿಗಳಿಗೆ ಮಾತ್ರ ಗೊತ್ತಿತ್ತು. ಉಳಿದ ಋಷಿಗಳು ಆತನಿಗೆ ಹೇಳಿದರು : ''ಹೇ ರಾಮ, ನೀನು ದಶರಥನ ಪುತ್ರ ಎಂಬುದಾಗಿ ಮಾತ್ರ ನಮಗೆ ಗೊತ್ತಿದೆ.''

✸ ಒಮ್ಮೆ ರಾಮ, ಸೀತೆ, ಲಕ್ಷ್ಮಣ ಜೊತೆಯಲ್ಲಿ ನಡೆದುಕೊಂಡು ಹೋಗುತ್ತಿದ್ದರು. ಮುಂದೆ ರಾಮ, ಮಧ್ಯೆ ಸೀತೆ, ಹಿಂದೆ ಲಕ್ಷ್ಮಣ. ಸೀತೆ ಮಧ್ಯೆ ಇದ್ದುದರಿಂದ ಲಕ್ಷ್ಮಣ ರಾಮನನ್ನು ನೋಡಲಾಗಲಿಲ್ಲ. ಅದೇರೀತಿ ಮಾಯೆ ಮಧ್ಯೆ ಇರುವುದರಿಂದ ಜೀವಾತ್ಮನಿಗೆ ಪರಮಾತ್ಮನ ದರ್ಶನ ದೊರೆಯುತ್ತಿಲ್ಲ.

✸ ಭಕ್ತಿಯ ದೃಷ್ಟಿಯಿಂದ ಶಕ್ತಿವಿಶೇಷತೆ ಇದೆ. ರಾಮನೇ ಎಲ್ಲವೂ ಆಗಿರುವುದೇನೋ ನಿಜ. ಆದರೆ ಕೆಲವದರಲ್ಲಿ ಹೆಚ್ಚಾಗಿ, ಇನ್ನು ಕೆಲವದರಲ್ಲಿ ಕಡಮೆಯಾಗಿ ವ್ಯಕ್ತವಾಗಿದ್ದಾನೆ. ಅವತಾರ ಪುರುಷನಲ್ಲಿ ಒಂದು ವಿಧವಾದ ವ್ಯಕ್ತತೆ, ಜೀವರಲ್ಲಿ ಇನ್ನೊಂದು ವಿಧವಾದ ವ್ಯಕ್ತತೆ. ಅವತಾರಪುರುಷರಲ್ಲೂ ದೇಹಬುದ್ಧಿ ಇರುತ್ತದೆ. ಅವರ ಶರೀರಧಾರಣೆ ಮಾಯೆಯಿಂದ. ರಾಮ ಸೀತೆಗಾಗಿ ಅತ್ತ.

✸ ಪುರಾಣಗಳಲ್ಲಿ ಹೇಳಿದೆ: ರಾಮಚಂದ್ರ ಸಭೆಗೆ ಬಂದಾಗ, ಶತಸೂರ್ಯರ ಉದಯವಾದಂತಾಯಿತು ಎಂಬುದಾಗಿ. ಹಾಗಾದರೆ ಸಭಿಕರೆಲ್ಲ ಏಕೆ ಸುಟ್ಟು ಭಸ್ಮವಾಗಿಬಿಡಲಿಲ್ಲ ? ಅದಕ್ಕೆ ಕಾರಣ, ಆತನ ಜ್ಯೋತಿ ಜಡ ಜ್ಯೋತಿ ಅಲ್ಲ. ಸೂರ್ಯೋದಯವಾದೊಡನೆ ಪದ್ಮಗಳು ಅರಳುವ ಹಾಗೆ ಇಡೀ ಸಭಿಕರ ಹೃತ್ಪದ್ಮ ಅರಳಲಾರಂಭಿಸಿದುವು.

✸ ಭಾರದ್ವಾಜಾದಿ ಋಷಿಗಳು ರಾಮನನ್ನು ಸ್ತೋತ್ರಮಾಡಿದರು: ''ಹೇ ರಾಮ, ನೀನೇಅಖಂಡ ಸಚ್ಚಿದಾನಂದ. ನೀನು ನಮ್ಮ ಹತ್ತಿರಕ್ಕೆ ಮನುಷ್ಯರೂಪ ಧರಿಸಿ ಬಂದಿದ್ದೀಯೆ. ನೀನೇ ನಿನ್ನನ್ನು ನಿನ್ನ ಮಾಯೆಯಿಂದ ಮುಚ್ಚಿಕೊಂಡಿರುವುದರಿಂದ ಮನುಷ್ಯ ನಾಗಿ ಕಾಣಬರುತ್ತಿದ್ದೀಯೆ.'' ಈ ಋಷಿಗಳು ರಾಮನ ಪರಮ ಭಕ್ತರು. ಇವರದು ಪಕ್ವ ಭಕ್ತಿ.

✸ ನಾರದಾದಿ ಋಷಿಗಳು ಶ್ರೀರಾಮನನ್ನು ಸ್ತೋತ್ರ ಮಾಡಿದರು: ''ಹೇ ರಾಮ, ಗಂಡಸರಾಗಿ ಕಾಣುವವರೆಲ್ಲಾ ನೀನೇ, ಹೆಂಗಸರಾಗಿ ಕಾಣುವವರೆಲ್ಲಾ ಸೀತೆಯೇ. ನೀನು ಇಂದ್ರ, ಸೀತೆ ಇಂದ್ರಾಣಿ; ನೀನು ಶಿವ, ಸೀತೆ ಶಿವೆ; ನೀನು ನರ, ಸೀತೆ ನಾರಿ. ಹೆಚ್ಚಾಗಿ ಇನ್ನೇನು ತಾನೆ ನಾವು ಹೇಳೋಣ? ಗಂಡಸು ಎಲ್ಲೋ ಅಲ್ಲಿ ಇರತಕ್ಕವನು ನೀನೆ. ಹೆಂಗಸು ಎಲ್ಲೋ ಅಲ್ಲಿ ಇರತಕ್ಕವಳು ಸೀತೆಯೆ.''

✸ ಒಮ್ಮೆ ರಾಮಚಂದ್ರನಿಗೆ ತೀವ್ರ ವೈರಾಗ್ಯ ಬಂದುಬಿಟ್ಟಿತು. ಅದನ್ನು ನೋಡಿ ದಶರಥ ಬಹಳ ಚಿಂತಿತನಾಗಿ ವಸಿಷ್ಠನನ್ನು ಸಮೀಪಿಸಿ, ರಾಮ ಸಂಸಾರವನ್ನು ತ್ಯಾಗ ಮಾಡದ ಹಾಗೆ ಬುದ್ಧಿವಾದ ಹೇಳಬೇಕೆಂದು ಬೇಡಿಕೊಂಡ. ವಸಿಷ್ಠ ರಾಮನ ಹತ್ತಿರಕ್ಕೆ ಬಂದು ನೋಡುತ್ತಾನೆ, ಆತ ವಿಮನಸ್ಕನಾಗಿ ಕುಳಿತಿದ್ದಾನೆ. ಅಂತರ್ಯದಲ್ಲಿ ತೀವ್ರ ವೈರಾಗ್ಯ ತುಂಬಿ ತುಳುಕಾಡುತ್ತಿದೆ. ವಸಿಷ್ಠ ಆತನಿಗೆ ಹೇಳಿದ: ''ನೀನು ಸಂಸಾರವನ್ನು ಏಕೆ ತ್ಯಾಗ ಮಾಡಬೇಕು? ಸಂಸಾರ ಆತನಿಂದ ಹೊರಗಿದೆಯೇನು? ನನ್ನೊಡನೆ ವಿಚಾರಮಾಡಿ ನೋಡು.'' ರಾಮನ ಅನುಭವಕ್ಕೆ ಬಂತು, ಈ ಜಗತ್ತು ಪರಬ್ರಹ್ಮನಿಂದಲೇ ಉದ್ಭವವಾಗಿದೆ ಎಂದು. ಅದಕ್ಕಾಗಿ ಆತ ಸುಮ್ಮನೆ ಆಗಿಬಿಟ್ಟ.

✸ ರಾಮ ಹನುಮಂತನನ್ನು ಕೇಳಿದ, ''ಹನುಮಂತ, ನೀನು (ಲಂಕೆಯಿಂದ) ಸೀತೆಯ ಸಂದೇಶವನ್ನು ತಂದಿದ್ದೀಯೆ; ಆಕೆ ಯಾವ ರೀತಿ ಇದ್ದಾಳೆ ಎಂಬುದನ್ನು ನನಗೆ ತಿಳಿಸು.'' ಹನುಮಂತ ಹೇಳಿದ, ''ಹೇ ರಾಮ, ಸೀತೆಯ ಸ್ಥೂಲ ಶರೀರ ಅಲ್ಲಿ ಬಿದ್ದಿರು ವುದನ್ನು ಕಂಡೆ. ಅದರೊಳಗೆ ಪ್ರಾಣವೂ ಇಲ್ಲ ಮನಸ್ಸೂ ಇಲ್ಲ. ಆಕೆ ತನ್ನ ಪ್ರಾಣ ಮನಸ್ಸನ್ನು ನಿಮ್ಮ ಪಾದಪದ್ಮಗಳಿಗೆ ಅರ್ಪಿಸಿ ಬಿಟ್ಟಿದ್ದಾಳೆ.''

✸ ಭಗವಂತ ಸಾಕಾರ ರೂಪವೇ ಆಗಲಿ ಅಥವಾ ಆತನ ಅವತಾರವೇ ಆಗಲಿ ಜ್ಞಾನಿಗೆ ಬೇಕಾಗಿಲ್ಲ. ಶ್ರೀರಾಮಚಂದ್ರ ಕಾಡಿನಲ್ಲಿ ಗೊತ್ತುಗುರಿಯಿಲ್ಲದೆ ಅಲೆಯುತ್ತಿದ್ದಾಗ ಆತ ಅನೇಕ ಋಷಿಗಳನ್ನು ಸಂಧಿಸಿದ. ಅವರೆಲ್ಲರೂ ಆತನನ್ನು ತಮ್ಮ ತಮ್ಮ ಆಶ್ರಮಗಳಿಗೆ ಕರೆದುಕೊಂಡು ಹೋಗಿ ಬಹಳವಾಗಿ ಆದರ ಸತ್ಕಾರ ಮಾಡಿದರು. ಆಗ ಅವರು ಹೇಳಿದರು, ''ಹೇ ರಾಮ, ಇಂದು ನಾವು ನಿನ್ನ ದರ್ಶನ ಪಡೆದು ಧನ್ಯರಾದೆವು. ನೀನು ದಶರಥನ ಮಗ ಎಂಬುದು ನಮಗೆ ಗೊತ್ತಿದೆ. ಆದರೆ ಭಾರದ್ವಾಜಾದಿ ಋಷಿಗಳು ನಿನ್ನನ್ನು ಅವತಾರಪುರುಷನೆಂದು ಕರೆಯುತ್ತಾರೆ; ನಾವು ಮಾತ್ರ ಹಾಗೆ ಭಾವಿಸುವುದಿಲ್ಲ. ನಾವು ಅಖಂಡ ಸಚ್ಚಿದಾನಂದನ ಧ್ಯಾನ ಮಾಡುತ್ತಿದ್ದೇವೆ'' ಅಂತ. ರಾಮ ಪ್ರಸನ್ನಚಿತ್ತನಾಗಿ ನಗಲಾರಂಭಿಸಿದ.

✸ ರಾಮಚಂದ್ರ ಯಾರು ಎಂಬುದು ಕೇವಲ ಹನ್ನೆರಡು ಜನ ಋಷಿಗಳಿಗೆ ಮಾತ್ರ ಗೊತ್ತಿತ್ತು. ಅವತಾರ ಪುರುಷನನ್ನು ಗುರುತಿಸಲು ಎಲ್ಲರ ಕೈಯಿಂದಲೂ ಸಾಧ್ಯವಿಲ್ಲ.

ಶ್ರೀರಾಮಕೃಷ್ಣ ವಚನವೇದದಿಂದ

# ಕೈಲಾಸ - ಮಾನಸ ಸರೋವರ ಯಾತ್ರೆ

ಡಾ. ಹೆಚ್. ಪಾಂಡುರಂಗ ವಿಠಲ

ಹಲವು ಕಾರಣಗಳಿಂದ ಭಾರತೀಯರಿಗೆ ಕೈಲಾಸ-ಮಾನಸ ಸರೋವರ ಯಾತ್ರೆ ಮಹತ್ವದ್ದಾಗಿದೆ. ಈ ಯಾತ್ರೆಯನ್ನು ಮಾಡಿದವರು ಧನ್ಯತಾಭಾವವನ್ನು ಹೊಂದುವುದಂತೂ ನಿಜ. ಈಚೆಗೆ ಈ ಯಾತ್ರೆಯನ್ನು ಮಾಡಿ ಬಂದಿರುವ ಲೇಖಕರ ಅನುಭವಗಳು ಇಲ್ಲಿವೆ. ಶ್ರೀಯುತರು ಮೈಸೂರಿನಲ್ಲಿ ಕನ್ನಡ ಉಪನ್ಯಾಸಕರಾಗಿದ್ದಾರೆ. ಒಳ್ಳೆಯ ಚಿಂತಕರೂ, ಬರಹಗಾರರೂ ಆಗಿರುವ ಇವರ ಹಲವು ಬರಹಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ.

ವಯಸ್ಸಾದ ಮೇಲೆ ಕೈಲಾಸ ಮಾನಸ ಸರೋವರ ಯಾತ್ರೆ ಮಾಡಬೇಕೆಂದಿದ್ದೀರಾ? ಬೇಡ. ನಿರ್ಧಾರ ಮಾಡಿಬಿಟ್ಟಿದ್ದರೆ ಎರಡು ಮೂರು ವರ್ಷ ಮುಂದೂಡಿ. ಆದಷ್ಟು ಬೇಗ ಹೋಗಲೇ ಬೇಕೆಂದಿದ್ದರೆ, ಈ ಲೇಖನ ಓದಿ.

## ಎಚ್ಚರಿಕೆಯಿಂದ ನಿರ್ಧಾರ ಮಾಡಿ

ಬೇಡ ಎನ್ನಲು ಹಲವು ಕಾರಣಗಳಿವೆ. ಮೊದಲನೆಯದು: ಕೈಲಾಸ ಪರಿಕ್ರಮ ಬಿಟ್ಟು ಉಳಿದೆಲ್ಲ ಹಾದಿಯನ್ನೂ ಅತ್ಯಂತ ಕಡಿಮೆ ಶ್ರಮದಲ್ಲಿ ಲಕ್ಸುರಿ ಬಸ್‌ಗಳಲ್ಲಿ ಕ್ರಮಿಸಬಹುದಾದ ನಾಥು ಲಾ ಪಾಸ್ ಮಾರ್ಗವನ್ನು ಚೀನೀಯರು ಮುಚ್ಚಿರುವುದು. ಇನ್ನೆರಡು ಮೂರು ವರ್ಷಗಳಲ್ಲಿ ಎಂದಿನಂತೆ ಈ ಮಾರ್ಗ ತೆರವಾಗಬಹುದು. ಎರಡನೆಯ ಕಾರಣ ಆರೋಗ್ಯದ್ದು. ೧೮,೦೦೦ ಅಡಿ ಎತ್ತರದಲ್ಲಿ ವಾತಾವರಣದ ಒತ್ತಡ ಸಮುದ್ರ ತೀರದ ಮಟ್ಟದ ಅರ್ಧದಷ್ಟಾಗುತ್ತದೆ. ಗಾಳಿಯಲ್ಲಿ ಆಮ್ಲಜನಕದ ಪ್ರಮಾಣ ಕುಗ್ಗುತ್ತದೆ. ಅಧಿಕ ರಕ್ತದೊತ್ತಡದಿಂದಾಗಿ ಮುಖ ಬಾತುಕೊಳ್ಳುತ್ತದೆ. ೬೫೦೦ಅಡಿ ಎತ್ತರದಿಂದಲೇ ತಲೆತಿರುಗುವುದು, ವಾಂತಿಯ ಅನಿಸಿಕೆ, ತಲೆನೋವು, ನಿದ್ರೆ ಬರದಿರುವುದು, ಉಸಿರಾಟದ ಕಷ್ಟ ಮೊದಲಾದ ಪರ್ವತವಾಸದ ತೊಂದರೆಗಳು ಆರಂಭ. ದೇಹದಲ್ಲಿ ನೀರಿನ ಅಂಶ ಕಡಿಮೆ ಆಗುವುದು, ದೀರ್ಘವಾಗಿ ಉಸಿರಾಡದಿರುವುದು ಈ ಲಕ್ಷಣಗಳು ಕಾಯಿಲೆಗಳಾಗಲು ಕಾರಣ. ಸರಕಾರ ಭಾರತದಲ್ಲೇ ಯಾತ್ರಿಗಳನ್ನು ಎತ್ತರದ ಹಂತಗಳಲ್ಲಿ ಅಲ್ಲಲ್ಲಿ ಒಂದೆರಡು ದಿನ ನಿಲ್ಲಿಸಿ ದೇಹ ಆ ವಾತಾವರಣಕ್ಕೆ ಹೊಂದಿಕೊಳ್ಳುವಂತೆ ನೋಡಿಕೊಳ್ಳುತ್ತದೆ.

ಅತಿ ಎತ್ತರದ (೮೦೦೦ ಅಡಿಗಿಂತ ಮೇಲೆ) ಕಾಯಿಲೆಗಳು ಏರಿದ ಆರರಿಂದ ೧೨ಗಂಟೆಗಳಲ್ಲಿ ತಮ್ಮ ಪ್ರತಾಪ ತೋರುತ್ತವೆ. ವಿರಳ ವಾತಾವರಣದಿಂದಾಗಿ ಬರುವ ಇವು ಮೂರು ವಿಧ: ತೀವ್ರ ಪರ್ವತ ಕಾಯಿಲೆ (ಹಸಿವೆ ಇಲ್ಲದಿರುವುದು, ತಲೆತಿರುಗುವುದು, ವಾಂತಿ; ಸುಸ್ತು, ತೇಲುವ ಅನುಭವ; ನಿದ್ರೆಬರದಿರುವುದು) ಇದು ತಡೆದುಕೊಳ್ಳುವಂತಿದ್ದರೆ, ಡಯಾಮಾಕ್ಸ್ (Dia-mox) ಮಾತ್ರೆ ಸಾಕು. ಅಸಹನೀಯವಾಗಿದ್ದರೆ, ಕೆಳಗೆ ಇಳಿಯಬೇಕು. ಇದು ಸಹಿಸಲಸಾಧ್ಯವಾಗಿದ್ದರೆ, ಅತಿ ಎತ್ತರದ ಸೆರೆಬ್ರಲ್ ಎಡಿಮಾ ಕಾಯಿಲೆ ಎರಡನೆಯ ಹಂತ. ಮಿದುಳು ಬಾತು, ದ್ರವ ಪಕ್ಕಕ್ಕೆ ಒಸರಿ, ಮಿದುಳಿನ ಕಾರ್ಯಗಳು ಅಸ್ತವ್ಯಸ್ತವಾಗುವುದು ಇದರ ಲಕ್ಷಣ. ರಾತ್ರಿ ಕಾಣಿಸಿಕೊಳ್ಳುವ ಇದು ಕೋಮಾ ಹಂತಕ್ಕೆ ಹೋಗಿ, ಕೆಲವು ಗಂಟೆಗಳಿಂದ ಎರಡು ದಿನಗಳೊಳಗೆ ಸಾವನ್ನು ತರಬಲ್ಲುದು. ಔಷಧಗಳಿಗೆ ಬಗ್ಗದ ತೀವ್ರ ತಲೆನೋವು, ಅನಿಯಂತ್ರಿತ ಮಲ ಮೂತ್ರಗಳು, ಅಸಹಜ ಚಲನೆ, ಪ್ರಜ್ಞೆ ತಪ್ಪುವುದು, ಪಕ್ಷವಾತ ಮೊದಲಾದುವು ಇದರ ಲಕ್ಷಣಗಳು. ಡಯಾಮಾಕ್ಸ್, ಜೊತೆಗೆ ಅಸಿಟೋಜೋಲಮೈಡ್( Acetazola-mide) ಕೊಡುವುದಲ್ಲದೆ, ಕೆಳ ಮಟ್ಟಕ್ಕೆ ತಕ್ಷಣವೇ ಕರೆದೊಯ್ಯಬೇಕು. ಇದರಷ್ಟೇ ತೀವ್ರವಾದ ಇನ್ನೊಂದು ಹಂತದ ಅತಿ ಎತ್ತರದ ಕಾಯಿಲೆ, ಪಲ್ಮನರಿ ಎಡಿಮಾ. ಶ್ವಾಸಕೋಶಗಳಲ್ಲಿ ದ್ರವ ತುಂಬಿ, ವಿಶ್ರಾಂತಿಯಲ್ಲೂ ಉಸಿರಾಡಲಾಗದಿರುವುದು, ನಿಲ್ಲದ ಕೆಮ್ಮು, ರಕ್ತಯುಕ್ತ ಕಫ, ತೀರ ನಿಶ್ಶಕ್ತಿ, ಹೃದಯದ ಬಡಿತ ಹೆಚ್ಚುವುದು ಇದರ ಲಕ್ಷಣ. ಆಮ್ಲಜನಕ ಕೊಡುತ್ತ ಕೆಳ ಹಂತಕ್ಕೆ ಕರೆದೊಯ್ಯಬೇಕು. ಈ ಮೂರು ಕಾಯಿಲೆಗಳಲ್ಲದೆ, ಕೆಲವರಿಗೆ ೧೬೦೦೦ ಅಡಿಗಳಿಗಿಂತ ಹೆಚ್ಚಿನ ಎತ್ತರದಲ್ಲಿ ರೆಟಿನಾದಲ್ಲಿ ರಕ್ತಸ್ರಾವವಾಗಿ, ಅರೆಕುರುಡುತನ ಬರಬಹುದು. ಹಿಮದ ಪ್ರತಿಫಲಿತ ಪ್ರಕಾಶ ನೋಡಿ ಕಣ್ಣುಗತ್ತಲೆ ಬರಬಹುದು.

ಕುಡಿತ, ಬೀಡಿ ಸಿಗರೇಟು ವರ್ಜ್ಯ. ಉಸಿರಾಟ ತಗ್ಗಿಸುವುದರಿಂದ ನೋವು ನಿವಾರಕಗಳು, ನಿದ್ದೆಗುಳಿಗೆ ಸೇವಿಸುವಂತಿಲ್ಲ.

ಬೇಡ ಎನ್ನಲು ಆರ್ಥಿಕ ಕಾರಣವೂ ಮುಖ್ಯ. ೨೨ ದಿನದ ಈ ಯಾತ್ರೆಗೆ (ಬ್ಯಾಚ್ ೬-ನಾಥು ಲಾ ೨೦೧೬ ಜುಲೈ) ನನಗೆ ಎರಡು ಲಕ್ಷ ಹದಿನಾಲ್ಕು ಸಾವಿರ ರೂ. ಖರ್ಚಾಯಿತು. ಇದರಲ್ಲಿ ಚೀನಾ ಸರಕಾರಕ್ಕೆ ಒಂದು ಲಕ್ಷ ಹತ್ತುಸಾವಿರಕ್ಕಿಂತ ಹೆಚ್ಚು ಕಟ್ಟಬೇಕಾಯಿತು. ಟಿಬೆಟ್ಟಿನಲ್ಲಿನ ಹನ್ನೊಂದು ದಿನದ ವಾಸ್ತವ್ಯ, ಬಸ್ ಪ್ರಯಾಣಕ್ಕಾಗಿ ಇಷ್ಟೊಂದು ನೀಡಬೇಕು! ಅದರಲ್ಲೂ, ಆಹಾರ ನಮ್ಮದೇ. ಲಾಜಿ (lazi) ಎಂಬ ಊರನ್ನು ಬಿಟ್ಟರೆ ಊರಿನಿಂದ ದೂರದಲ್ಲೇ ಇರುವ, ಹೊರಹೋಗಲು ಅನುಮತಿ ಇಲ್ಲದ ರಕ್ಷಿತ ವಸತಿಗಳಲ್ಲಿ ವಾಸ್ತವ್ಯ. ವಸತಿ ಚೆನ್ನಾಗಿದ್ದರೂ, ಚೀನೀ ಮಾದರಿಯ ಸಾರ್ವಜನಿಕ ಶೌಚಾಲಯಗಳು ಅಸಹನೀಯ. ಸ್ನಾನಕ್ಕೆ ವ್ಯವಸ್ಥೆ ಇಲ್ಲ. ದೇರಾಪುಕ್(Deraphuk) ಎಂಬಲ್ಲಿ ಮಾತ್ರ ಕಾಣುವ ಕೈಲಾಸ ಪರ್ವತ ಚರಣ ಸ್ಪರ್ಶಕ್ಕೆ ಅವಕಾಶವಿಲ್ಲ. ಪರಿಕ್ರಮದಲ್ಲಿ ಎರಡು ಕಡೆ ಮಾತ್ರ ಸ್ವಲ್ಪ ಕಾಣಿಸಿಕೊಳ್ಳುವ ಕೈಲಾಸವನ್ನು ನೋಡಲು ಗೊತ್ತಾಗದೆ ಹೋಗುವ ಸಂಭವವೇ ಹೆಚ್ಚು. ಪೂರ್ಣ ಕೈಲಾಸ ದರ್ಶನ ಮಾನಸ ಸರೋವರದಿಂದ ಮಾತ್ರ ಸಾಧ್ಯ. ನಾವು ನೋಡುವ ಕೈಲಾಸ ಪರ್ವತದ ಆಕರ್ಷಕ ಫೋಟೋಗಳು ಅಲ್ಲಿಂದಲೇ ತೆಗೆದವು.

## ಹೆಚ್ಚು ನಡೆಯಬೇಕಿಲ್ಲದ ನಾಥು ಲಾ ಪಾಸ್ ಮಾರ್ಗ

ವಯಸ್ಸಾದವರಿಗಾಗಿನ ನಾಥು ಲಾ ಪಾಸ್ ಮಾರ್ಗ (ಇತ್ತೀಚಿನವರೆಗೂ) ತೆರೆದಿದ್ದು ಕೈಲಾಸ ಮಾನಸ ಸಂದರ್ಶನವನ್ನು ಸುಗಮಗೊಳಿಸಿದೆ. ಆದರೆ ಚೀನಾ ಸರಕಾರ ಕೈಲಾಸ ಪರಿಕ್ರಮ ಹಾಗೂ ಮಾನಸ ಸರೋವರ ಪರಿಕ್ರಮಗಳನ್ನು ಒಟ್ಟುಗೂಡಿಸಿ ಹಣ ಕಟ್ಟಿಸಿಕೊಳ್ಳುತ್ತದೆ. ನನ್ನ ಸಲಹೆ ಇವೆರಡನ್ನೂ ಬೇರೆ ಮಾಡಿ, ವಯಸ್ಸಾಗಿ, ಕೈಲಾಸ ಪರಿಕ್ರಮ ಮಾಡಲು ಆಗದವರು ಕಡಿಮೆ ಹಣ ಮತ್ತು ದಿನಗಳಲ್ಲಿ ಕೇವಲ ಮಾನಸ ಸರೋವರ ಹಾಗೂ ಅಲ್ಲಿಂದಲೆ ಕೈಲಾಸ ದರ್ಶಿಸಿ ಹೋಗುವಂತೆ ಅವಕಾಶ ನೀಡಿದರೆ ಚೆನ್ನು. ಖಾಸಗಿಯವರು ಬರಿ ೧೨-೧೫ ದಿನಗಳಲ್ಲಿ ಪ್ರವಾಸ ಮಾಡಿಸುವುದರಿಂದ ಎತ್ತರದ ವಾತಾವರಣಕ್ಕೆ ದೇಹ ಹೊಂದಿಕೊಳ್ಳದೆ, ಕೈಲಾಸ ಪರಿಕ್ರಮ ಮಾಡಲಾಗದೆ ಹೋಗುವವರ ಸಂಖ್ಯೆ ಅಧಿಕ.

ಪ್ರವಾಸವನ್ನು ಮುಂದೂಡಿ ಎನ್ನಲು ಕಾರಣ ಪರಿಕ್ರಮ ಮಾರ್ಗದಲ್ಲಿ ಎಲ್ಲ ಕಡೆ ರಸ್ತೆಗಳನ್ನು ಮಾಡುತ್ತಿರುವುದು. ಈಗಾಗಲೇ ಪರಿಕ್ರಮದ ಪ್ರಾರಂಭದ ಯಮದ್ವಾರದವರೆಗೆ ಬಸ್‌ನಲ್ಲಿ ಹೋಗುವಂತಾಗಿದೆ. ಮುಂದೆ ದೇರಾಪುಕ್‌ವರೆಗೆ ಕಾರು, ಮೆಟಾಡರ್‌ಗಳು ಹೋಗುವಂತಹ ರಸ್ತೆ ಇದೆ. ದೊಲ್ಮಾ ಪಾಸ್ ಹಾಗೂ ಅದರಿಂದ ಕೆಳಕ್ಕೆ ಇಳಿಯುವ ೧೯ ಕಿ.ಮೀ. ದೂರವನ್ನು ಬಿಟ್ಟರೆ ಉಳಿದೆಡೆ ಬಸ್ಸು, ದೊಡ್ಡ ಕಾರುಗಳಲ್ಲಿ ಯಾತ್ರಿಗಳನ್ನು ಒಯ್ಯಬಹುದಾದ ದಿನ ದೂರವಿಲ್ಲ. ಕುದುರೆಯವರ, ಪೋರ್ಟರ್‌ಗಳ ಜೀವನಕ್ಕೆ ತೊಂದರೆ ಆಗಬಾರದು ಎಂದು ಹೀಗೆ ಮಾಡುತ್ತಿಲ್ಲವೇನೋ. ಅಲ್ಲಿನವರು ದಾರಿಯುದ್ದಕ್ಕೂ ಇರುವ ಬೌದ್ಧಮತಗಳಿಗೆ ಕಾರುಗಳಲ್ಲಿಯೇ ಹೋಗುತ್ತಿದ್ದಾರೆ. ಜುಂಜುಯಿ ಪೂ (Zhunzhui Pu) ನಿಂದ ಮುಂದಕ್ಕೆ ಈ ಕಡೆ ೫ ಕಿ.ಮೀ. ಕಾಲುಹಾದಿಯಲ್ಲಿ ನಮ್ಮನ್ನು ಕುದುರೆ ಒಯ್ಯುತ್ತಿದ್ದರೆ ನದಿಯ ಆಚೆ ದಡದಲ್ಲಿ ಸೊಗಸಾದ ಟಾರ್ ಮಾರ್ಗದಲ್ಲಿ ಕಾರುಗಳು ಜೊಂಗ್‌ಬಾ (Zhongba) ಕಡೆ ವೇಗವಾಗಿ ಸಾಗುತ್ತಿರುತ್ತವೆ.

ಆದಷ್ಟು ಬೇಗನೆ ಯಾತ್ರೆ ಹೋಗಬೇಕೆಂದಿದ್ದರೆ, ನನ್ನ ಅನುಭವಕ್ಕೆ ಬಂದ ಅಂಶಗಳನ್ನು, ಸಲಹೆಗಳನ್ನು ತಮ್ಮ ಅವಗಾಹನೆಗಾಗಿ ಬರೆಯುತ್ತೇನೆ.

## ನಮ್ಮ ಸರಕಾರದ ಎರಡು ಯೋಜನೆಗಳು

ಭಾರತ ಸರಕಾರದವರ ಯೋಜನೆಯ ಅಡಿ ಹೋಗುವುದು ಒಳ್ಳೆಯದು. ಏಕೆಂದರೆ ವೈಜ್ಞಾನಿಕವಾಗಿ ನಮ್ಮ ದೇಹ ಎತ್ತರದ ವಾತಾವರಣಕ್ಕೆ ಹೊಂದಿಕೊಳ್ಳುವಂತೆ ಅಲ್ಲಲ್ಲಿ ನಿಲ್ಲಿಸಿ ಕರೆದೊಯ್ಯುತ್ತಾರೆ. ಯಾತ್ರಿಗಳ ಪ್ರತಿ ಗುಂಪಿಗೆ ಚೀನಾ ಸರಕಾರದೊಡನೆ ಸಮನ್ವಯ ಸಾಧಿಸಲು, ಅಗತ್ಯಗಳನ್ನು ನೋಡಿಕೊಳ್ಳಲು ಐಎಎಸ್, ಐಪಿಎಸ್ ಮಟ್ಟದ ಅಧಿಕಾರಿಗಳನ್ನು ಲಯಸನ್ ಆಫೀಸರ್ ಆಗಿ ಜೊತೆಗೆ ಕಳಿಸುತ್ತಾರೆ. ಚೀನೀಯರೂ ತಮ್ಮ ಪೊಲೀಸ್, ಅಧಿಕಾರಿಗಳನ್ನು ಬೆಂಗಾವಲು ವಾಹನಗಳಲ್ಲಿ ಯಾತ್ರೆಯುದ್ದಕ್ಕೂ ಕಳಿಸುತ್ತಾರೆ. ಬಸ್‌ಗಳಲ್ಲಿ ಚೀನೀ ಗೈಡುಗಳಿರುತ್ತಾರೆ. ಭಾರತದ ಕಡೆ ಯಾತ್ರಿಗಳ ಅಗತ್ಯ ಗಮನಿಸಲು ಕುಮಾವ್ ಮಂಡಲ್ ವಿಕಾಸ್ ನಿಗಮ್ ಮತ್ತು ಸಿಕ್ಕಿಂ ಟೂರಿಸಂ ಡೆವಲಪ್‌ಮೆಂಟ್ ಕಾರ್ಪೊರೇಷನ್ ಇವೆ. ಇದಲ್ಲದೆ, ಹೋಗುವಾಗ ಬರುವಾಗ ದಿಲ್ಲಿಯಲ್ಲಿ ಗುಜರಾತಿ ಸಮಾಜ ಸದನದಲ್ಲಿ ನಾಲ್ಕೈದು ದಿನಗಳ ಎ.ಸಿ. ವಸತಿ, ಊಟ ಉಚಿತವಾಗಿ ಲಭ್ಯ. ಸುಮಾರು ಮೂವತ್ತು ವರ್ಷಗಳ ಅನುಭವಗಳಿಂದ ಸರಕಾರೀ ಯಾತ್ರೆ ಪಕ್ವವಾಗಿದೆ. ಯಾತ್ರಿಗಳ ಸಂಕಷ್ಟಗಳನ್ನು ಅರಿತು, ಅದಕ್ಕೆ ತಕ್ಕ ಪರಿಹಾರಗಳನ್ನು ಯೋಜಿಸುತ್ತಾರೆ. ಎಲ್ಲ ಬ್ಯಾಚುಗಳಲ್ಲಿ ಎಲ್ಲ ರಾಜ್ಯಗಳ ಯಾತ್ರಿಗಳೂ ಇರುವಂತೆ ನೋಡಿಕೊಳ್ಳುವುದರಿಂದ, ವಿವಿಧತೆಯಲ್ಲಿ ಏಕತೆ ಅನುಭವಕ್ಕೆ ಬರುತ್ತದೆ. ಇಲ್ಲಿ ಆದ ಪರಿಚಯ ಜೀವನದುದ್ದಕ್ಕೂ ಬೆಳೆಯುವ ಸ್ನೇಹವಾಗುವುದೂ ಉಂಟು.

ಲಿಪುಲೇಕ್ ಪಾಸ್‌ನಲ್ಲಿ ೨೪೦ ಕಿ.ಮೀ. ಟ್ರೆಕ್ಕಿಂಗ್ ಇರುವುದರಿಂದ, ತರುಣರಿಗೆ ಸೂಕ್ತ. ನಾಥು ಲಾ ಪಾಸ್ ಮಾರ್ಗದಲ್ಲಿ ದಾರ್ಚೆನ್‌ವರೆಗೆ ಬಸ್‌ನಲ್ಲಿ ಹೋಗಬಹುದಾದ್ದರಿಂದ, ವಯಸ್ಸಾದವರಿಗೆ ಸೂಕ್ತ. ಈಗ ಮಾನಸ ಸರೋವರ ಪರಿಕ್ರಮವನ್ನು ಬಸ್‌ನಲ್ಲಿಯೇ ಮಾಡಿಸುತ್ತಾರೆ. ಮೇಲ್ಕಾಣಿಸಿದಂತೆ ತಮ್ಮ ಆರೋಗ್ಯ ಗಮನಿಸಿ, ಕೈಲಾಸ ಪರಿಕ್ರಮ ಮಾಡಬಹುದು. ನಮ್ಮ ಬ್ಯಾಚಿನ ೪೨ ಜನರಲ್ಲಿ ದಿಲ್ಲಿಯಲ್ಲಿಯೇ ಆರೋಗ್ಯ ಸರಿಯಿಲ್ಲವೆಂದು ನಿರಾಕರಿಸಲ್ಪಟ್ಟವರು ಐದು ಜನ. ೧೫ನೇ ಮೈಲಿಯಲ್ಲಿ (ಗ್ಯಾಂಗ್ಟೋಕ್‌ನಿಂದ ಮುಂದಿನ ಶಿಬಿರ) ಆರೋಗ್ಯ ಕೆಟ್ಟು ಹಿಂದಿ

ರುಗಿದವರು ಇಬ್ಬರು. ಉಳಿದ ೩೫ ಯಾತ್ರಿಗಳೂ ಕೈಲಾಸ ಪರಿಕ್ರಮ ಮಾಡಿದೆವು.

### ಸಿದ್ಧತೆ

ಆವಶ್ಯಕತೆಗಳು ಬೇರೆ ಬೇರೆ ಆಗಿರುವ ಎರಡು ಭಿನ್ನ ಮಾರ್ಗಗಳ ಯಾತ್ರೆಗೆ ಒಂದೇ ಮಾರ್ಗದರ್ಶಿ ಪುಸ್ತಕ ನೀಡುವುದರಿಂದ, ಸಿದ್ಧತೆ ಮಾಡಿಕೊಳ್ಳುವಲ್ಲಿ ಅಲ್ಪ ಸಮಸ್ಯೆ ಉಂಟಾಗುತ್ತದೆ. ಅಷ್ಟೊಂದು ಔಷಧಿಗಳು, ಎರಡು ಜೊತೆ ಷೂ, ಮನೆಯೊಳಗೆ ನಡೆಯಲು ಚಪ್ಪಲಿ, ಎರಡು ಸ್ವೆಟರ್, ಎರಡು ಜೊತೆ ಥರ್ಮಲ್ ವೇರ್‌ಗಳು, ಎಂಟು ಜೊತೆ ಸಾಕ್ಸ್, ಆರು ಷರಟು, ಐದು ಪ್ಯಾಂಟ್ ಇವೆಲ್ಲ ಅಗತ್ಯವಿಲ್ಲ. ಚೀನಾದಲ್ಲಿ ವಿಪರೀತ ಚಳಿಯಿದ್ದು, ಸ್ನಾನಕ್ಕೆ ಅವಕಾಶವಿಲ್ಲದ್ದರಿಂದ, ಒಂದು ಸ್ವೆಟರ್, ಒಂದು ಜೊತೆ ಥರ್ಮಲ್ ವೇರ್, ೨ ಜೊತೆ ಸಾಕ್ಸ್, ಮೂರು ಷರಟು–ಪ್ಯಾಂಟು ಸಾಕು. ರಾತ್ರಿ ಷರಟು–ಪ್ಯಾಂಟು ಹಾಕಿ ಮಲಗಿದರೆ, ನೈಟ್ ಡ್ರೆಸ್ ಅನಗತ್ಯ. ಬಿಸಿನೀರಿನ ಚೀಲ ಅಥವಾ ಸೀಸೆ ಬಳಸಿ ಚಳಿ ತಡೆಯಬಹುದು. ಶಾಲು, ಸ್ಲೀಪಿಂಗ್ ಬ್ಯಾಗುಗಳು ಬೇಡ. ಹವಾಯಿ ಚಪ್ಪಲಿಗಿಂತ ಸಾಕ್ಸ್‌ನೊಡನೆ ಹೊಂದಿಕೊಳ್ಳುವ ಹಗುರ ಚಪ್ಪಲಿ ಸೂಕ್ತ.

ನಾವೇ ನಮ್ಮ ಲಗೇಜುಗಳನ್ನು ಪ್ಯಾಕ್ ಮಾಡಬೇಕು, ನಾವೇ ಹೊತ್ತು ವ್ಯಾನಿಗೆ ಹಾಕಬೇಕು ಎಂಬುದನ್ನು ನೆನಪಿನಲ್ಲಿಡಿ. ಬೇಡದ ವಸ್ತುಗಳನ್ನು ದಿಲ್ಲಿಯಲ್ಲೋ, ಶೆರತಾಂಗ್‌ನಲ್ಲೋ ಇಟ್ಟು ಹೋಗಲು ವ್ಯವಸ್ಥೆ ಇದೆ. ಆಮ್ಲಜನಕದ ಕೊರತೆಯ ವಾತಾವರಣದಲ್ಲಿ ಪ್ಯಾಕ್ ಮಾಡುವುದು, ಹೊರುವುದು ಕಷ್ಟದಾಯಕ. ಸಣ್ಣ ಬೆಂಡೋಳಿಗೆಯಲ್ಲಿ ತುರುಕಿ, ಜಾಗವೇ ಇಲ್ಲದಂತೆ ಪ್ಯಾಕ್ ಮಾಡುವ ಅಭ್ಯಾಸ ಬಿಡಬೇಕು. ೨೦ ಕೆ.ಜಿ.ಗೆ ಸೀಮಿತವಾದದ್ದು ತೂಕವೇ ವಿನಃ ಗಾತ್ರವಲ್ಲ. ಮೂರು ದೊಡ್ಡ ಚೀಲಗಳಲ್ಲಿ ಅರ್ಧದಷ್ಟು ಮಾತ್ರ ತುಂಬಿ. ಎಲ್ಲ ವಸ್ತುಗಳೂ ಬೇಕೆಂದಾಗ ಸಿಗುತ್ತವೆ, ಅವಸರದಲ್ಲೂ ಬೇಗನೆ ಪ್ಯಾಕ್ ಮಾಡಬಹುದು. ಸದಾ ಬೇಕಾಗುವ ಅಗತ್ಯ ವಸ್ತುಗಳು, ಉಡುಪುಗಳು, ಒಳ ಉಡುಪುಗಳು, ಔಷಧಿ, ಆಹಾರ, ಇತರೆ ಎಂದು ವಿಭಾಗಿಸಿ, ಪ್ರತಿಯೊಂದನ್ನೂ ಮೊದಲು ಸಣ್ಣ ಪ್ಲಾಸ್ಟಿಕ್ ಚೀಲಗಳಲ್ಲಿ ತುಂಬಿ ಆಮೇಲೆ ದೊಡ್ಡ ಚೀಲದೊಳಗೆ ಇಟ್ಟರೆ, ಬೇಕಾದದ್ದು ಬೇಕಾದಾಗ ಸಿಗುತ್ತದೆ, ಮಳೆಗೂ ನೆನೆಯುವುದಿಲ್ಲ. ಹೊರಗೆ ಸಣ್ಣ ಫ್ಲಾಸ್ಕ್‌ನಲ್ಲಿ ಬಿಸಿನೀರಿಟ್ಟುಕೊಂಡು ಕುಡಿಯಲು ಬಳಸಬಹುದು.

### ಕುದುರೆ ಸವಾರಿ

ನಡೆದೇ ಹೋಗುವ ಹುಮ್ಮಸ್ಸಿದ್ದರೂ, ಇನ್ಶೂರೆನ್ಸಿನಂತೆ ಪೋರ್ಟರ್, ಕುದುರೆ ವ್ಯವಸ್ಥೆಗೆ ಹಣ ನೀಡುವುದು ಅತ್ಯಗತ್ಯ. ಮಧ್ಯೆ ಎಷ್ಟು ಹಣ ನೀಡುವೆನೆಂದರೂ, ಕುದುರೆ ಸಿಗುವುದಿಲ್ಲ. ಕುದುರೆಯ ಸವಾರಿ ಯಾಂತ್ರಿಕ ವಾಹನದಂತಲ್ಲ. ಎತ್ತಿಹಾಕಲು ಮನಸ್ಸು ಮಾಡಿದ ಕುದುರೆಯನ್ನು ನಿಯಂತ್ರಿಸಲು ಲಗಾಮು ಹಿಡಿದ ಮಾಲಿಕನಿಗೂ ಅಸಾಧ್ಯ. ಅದರ ಮನಸ್ಸನ್ನು ಅರಿತು, ಅದು ಕೇಳುವಂತೆ ಮಂತ್ರ ಜಪಿಸುತ್ತ, ಕಾಲಿನಿಂದ ಅದರ ಹೊಟ್ಟೆಗೆ ಸ್ವಲ್ಪ ಒತ್ತಡ ನೀಡಿ, ಅದರ ಉಸಿರಾಟ ಅನುಭವಿಸುವುದು ಒಳಿತು. ಏರುವಾಗ ಮುಂದಕ್ಕೂ, ಇಳಿಯುವಾಗ ಹಿಂದಕ್ಕೂ ಬಾಗಿ, ಸಮತೋಲ ಸಾಧಿಸಲು ಪ್ರಯತ್ನಿಸಿದರೆ, ಅದರ ಮನಸ್ಸಿಗೆ ಹಿತವಾಗುತ್ತದೆ. ಅದು ತನ್ನದೇ ಆದ ಇಚ್ಛಾಶಕ್ತಿ ಇರುವ ಜೀವಂತ ಪ್ರಾಣಿ ಎಂಬುದನ್ನು ಗಮನದಲ್ಲಿ ಇಡಬೇಕು. ಕುದುರೆ ಸವಾರಿ ನಿರಂತರ ಗಮನ, ಶ್ರಮ ಬೇಡುವ ಕೆಲಸ. ನಿದ್ದೆ ತಡೆದುಕೊಳ್ಳಬೇಕು. ನಮ್ಮ ಹಿಂದಿನ ಬ್ಯಾಚ್‌ನ ಮೂವರಿಗೆ ಬಿದ್ದು, ಕೈಮೂಳೆ ಮುರಿದಿತ್ತು; ನಮ್ಮ ಬ್ಯಾಚಿನಲ್ಲಿ ಒಬ್ಬರಿಗೆ ಮೂರು ಬಾರಿ ಬಿದ್ದು, ಕಾಲ ಮೂಳೆ ಹೇರ್‌ಲೈನ್ ಫ್ರಾಕ್ಚರ್ ಆಯಿತು. ಪೋರ್ಟರು, ಕುದುರೆಗಳನ್ನು ಲಾಟರಿ ಮೂಲಕ ಹಂಚುವುದರಿಂದ, ನಮ್ಮ ಇಷ್ಟದಂತೆ ಆರಿಸಲಾಗದು.

### ಹೆಚ್ಚು ಹೊರೆ ಅನಗತ್ಯ

ಆಹಾರದ ವಿಷಯದಲ್ಲಿ ಒಣಹಣ್ಣುಗಳನ್ನೂ, ತಿಂಡಿಗಳನ್ನೂ ತೆಗೆದುಕೊಂಡು ಹೋಗಿ ಎಂದು ಸಲಹೆ ನೀಡುತ್ತಾರೆ. ನಮ್ಮವರೇ ಚೆನ್ನಾಗಿ ಅಡುಗೆ ಮಾಡುವುದರಿಂದ ನಾನು ತೆಗೆದುಕೊಂಡು ಹೋದವು ಉಪಯೋಗಕ್ಕೆ ಬರಲಿಲ್ಲ. ಅರ್ಧ ಕೆ.ಜಿ. ಗ್ಲೂಕೋಸ್ ಕೂಡ. ಹೊರುವ ತೂಕ ಏರಿತು ಅಷ್ಟೆ. ಬೀಜವಾದದ್ದರಿಂದ ಚೀನೀಯರು ಬಾದಾಮಿಯನ್ನು ಒಳಗೆ ಬಿಡದೆ ಸೀಜ್ ಮಾಡುತ್ತಾರೆಂದು ಶೆರತಾಂಗ್‌ನಲ್ಲೆ ಬಿಟ್ಟೆ. ಆಗಾಗ್ಗೆ ತಿನ್ನಿ ಎಂದರೂ, ಅದು ಅಸಾಧ್ಯ. ಅಲ್ಲದೆ, ತಿಂದದ್ದು ಅರಗದೆ ಭೇದಿಯಾಗುತ್ತದೆ. ಖಾರವಿಲ್ಲದ ಅಡುಗೆ ಆದ್ದರಿಂದ, ಚಟ್ನಿಪುಡಿ, ಮೆಂತೆಹಿಟ್ಟು, ಉಪ್ಪಿನಕಾಯಿಗಳು, ಪುಳಿಯೋಗರೆ ಮೊದಲಾದ ಗೊಜ್ಜುಗಳನ್ನು ಸ್ವಲ್ಪಸ್ವಲ್ಪ ತೆಗೆದುಕೊಂಡು ಹೋದರೆ ಅನುಕೂಲ. ದಕ್ಷಿಣದ ನಾನು ಇಡೀ ಯಾತ್ರೆಯಲ್ಲಿ ನನಗೆ ಅಭ್ಯಾಸವಿಲ್ಲದ ರೋಟಿ ತಿನ್ನದೆ, ಅರಗುವ ಅನ್ನ, ದಾಲ್‌ಗಳಲ್ಲೆ ದಿನ ದೂಡಿದೆ. ಕಾಫಿ ಕುಡಿದೆ. ಸಹಯಾತ್ರಿಣಿ ಆಶಾ ಒಂದೆರಡು ಬಾರಿ ಖಾರದ ಗೊಜ್ಜು ನೀಡಿದ್ದರು.

ಆರೋಗ್ಯದ ಬಗ್ಗೆ ಕೂಡ ಹೆಚ್ಚು ಹೆದರುವ ಅಗತ್ಯವಿಲ್ಲ. ಪರ್ವತ ಏರುವಾಗ ಬರುವ ಕಾಯಿಲೆಗಳ ಬಗ್ಗೆ ಮೇಲೆ ಬರೆದದ್ದು ಸಾಮಾನ್ಯ ಜ್ಞಾನಕ್ಕಾಗಿ; ಎತ್ತರದ ವಾತಾವರಣಕ್ಕೆ ಹೊಂದಿಕೊಳ್ಳಲು ಒಂದೆರಡು ಕಡೆ ನಿಲ್ಲಿಸಿದಾಗ, ತಿರುಗಾಡಿ ವೃಥಾ ಆಯಾಸ ಮಾಡಿಕೊಳ್ಳದೆ ಇರಲಿ ಎಂದು. ನಿಜವಾಗಿ ನಾವು ತಕ್ಷಣ ಗಮನ ಕೊಡಬೇಕಾದ ಕಾಯಿಲೆ ಅತಿಸಾರ. ಉದಾಸೀನ ಮಾಡದೆ ತಕ್ಷಣ ನಿಮಗೆ ಹೊಂದುವ ಔಷಧ ತೆಗೆದುಕೊಳ್ಳಬೇಕು. ಇಲ್ಲವಾದರೆ, ನಿಶ್ಶಕ್ತರಾಗುತ್ತೀರ. ಇದಕ್ಕೆ ವಿರುದ್ಧವಾಗಿ ಮಲಬದ್ಧತೆ ಆದಾಗಲೂ, ಔಷಧದಿಂದ ಸರಿಪಡಿಸಿಕೊಳ್ಳಲೇಬೇಕು. ನಿಮ್ಮ ವಸತಿಯಲ್ಲಿನ ಟಾಯ್ಲೆಟ್‌ಗಿಂತ ಹೊರಗಿನ ಚೀನೀ ಸಾರ್ವಜನಿಕ ಪಾಯಖಾನೆ ಅತಿ ಘೋರ ಎಂಬುದನ್ನು ಮನಸ್ಸಿನಲ್ಲಿಡಿ. ಎರಡನೆಯದು ಶೀತ. ಮೊದಲೇ ಉಸಿರಾಟ ಕಷ್ಟ. ಶೀತವಾದರಂತೂ ನಿದ್ರೆ

ಬಾರದು. ತಲೆನೋವು, ಜ್ವರಗಳು ಮುಂದಿನ ಹಂತವಾಗಿ ಬರುವುವು. ಮೂರನೆಯ ತೊಂದರೆ ನಿದ್ರಾನಾಶ. ಇದರಿಂದ ಉತ್ಸಾಹವೇ ತಗ್ಗುತ್ತದೆ. ನಾನು ಎರಡು ಬಾರಿ ಅತಿಸಾರದ ಲಕ್ಷಣ ಕಂಡೊಡನೆ ಎಂಟೆರೋ ಕ್ವಿನಾಲ್ (enteroquinol) ಮಾತ್ರೆ ನುಂಗಿದೆ. ಶೀತ, ಅನಿದ್ರೆಗೆ ಕೊಟ್ಟಕ್ಕಲ್ ಡಾಕ್ಟರ್ ಶಂಕರನ್ ನಂಬೂದಿರಿಯವರ ಸಲಹೆ ಮೇರೆಗೆ ಶೀತಜ್ವರಾದಿಕ್ವಾಥಂ, ಗೋರೋಚನಾದಿಗುಳಿಕಂ, ಮಾನಸಮಿತ್ರವಟಕಂ ಆ ಇಪ್ಪತ್ತು ದಿನಗಳು ತೆಗೆದುಕೊಂಡೆ. ಎಲ್ಲರಿಗಿಂತ ಆರೋಗ್ಯವಾಗಿದ್ದೆ.

ಫೋಟೋ ತೆಗೆಯುವುದು, ಅದರಲ್ಲೂ ಕುದುರೆಯ ಮೇಲೆ ಕೂತು ಕ್ಯಾಮರಾ ಕ್ಲಿಕ್ ಮಾಡುವುದು ಸಾಹಸವೇ ಸರಿ. ಸೆಲ್ಫೀಗೀಳು ಅಪಾಯಕಾರಿ. ಫೋಟೋದೊಳಗೆ ನಿಮ್ಮ ಮುಖ ಇರಬೇಕು ಅನ್ನುವ ಹಂಬಲ ಬಿಟ್ಟರೆ, ಒಳ್ಳೆಯ ಫೋಟೋಗಳನ್ನು ತೆಗೆದುಕೊಳ್ಳಬಹುದು. ಕುದುರೆಯ ಬೆನ್ನ ಮೇಲಿನ ಹಿಡಿಯನ್ನು ಒಂದು ಕೈಯಲ್ಲಿ ಭದ್ರವಾಗಿ ಹಿಡಿದಿರಬೇಕು, ಅಷ್ಟೆ. ಗ್ಲೌಸ್ ತೆಗೆದಿದ್ದರೆ ಅನುಕೂಲ.

### ಶತ್ರು ದೇಶದಲ್ಲಿನ ಶೌಚಾಲಯ ಸಮಸ್ಯೆ

ಇನ್ನು ಮಾನಸಿಕ ಸಿದ್ಧತೆ. ಚೀನೀಯರ ತಿರಸ್ಕಾರಪೂರ್ವಕ ನಡವಳಿಕೆಗೆ ಉದಾಸೀನತೆ ತೋರಿ. ಯಾತ್ರೆಗೆ ಮಾಡುವ ಖರ್ಚಿನಲ್ಲಿ ಅಧಿಕ ಭಾಗವನ್ನು ಚೀನೀಯರು ವಸೂಲು ಮಾಡುವುದರ ಬಗ್ಗೆ ಮೇಲೆ ತಿಳಿಸಿದೆ. ಇದನ್ನೂ ಅಮೆರಿಕನ್ ಡಾಲರ್‌ಗಳಲ್ಲಿ ಪಾವತಿಸಬೇಕು. ರೂಪಾಯಿಗಳಲ್ಲಿ ನೀಡುವಂತಿದ್ದರೆ, ವಿದೇಶೀ ವಿನಿಮಯ ಉಳಿಯುತ್ತಿತ್ತು. ಶತ್ರು ದೇಶದಲ್ಲಿ ಪ್ರವಾಸ ಮಾಡುತ್ತಿದ್ದೇವೆ ಎಂಬುದನ್ನು ಮರೆಯದಿರಿ. ಊರ ಹೊರಗೆ ಯಾರೂ ಇಲ್ಲದ ಜಾಗದಲ್ಲಿ ವಸತಿ ಏರ್ಪಡಿಸುವುದು, ಸ್ನಾನದ ಮನೆಯೇ ಇಲ್ಲದಿರುವುದು, ಗುಂಡಿಯ ಮೇಲೆ ಒಂದು ಅಡಿ X ಐದು ಅಡಿ ಆಯತಾಕಾರದ ತೂತು ಮಾಡಿರುವ ಬಾಗಿಲು ಇಲ್ಲದ ವಾಸನೆಯ ಸಾರ್ವಜನಿಕ ಶೌಚಾಲಯ, ರಾತ್ರಿ ೯ರ ವರೆಗೆ ಕರೆಂಟ್ ನೀಡದಿರುವುದು, ನೀಡಿದ್ದನ್ನು ಬೆಳಗ್ಗೆ ೭ರ ಹೊತ್ತಿಗೆ ತೆಗೆಯುವುದು, ಟಿಬೆಟ್ ಪ್ರವೇಶಿಸಿದೊಡನೆ ಪಾಸ್‌ಪೋರ್ಟ್‌ಗಳನ್ನು ಇಸಿದುಕೊಂಡು ಭಾರತ ಪ್ರವೇಶಿಸುವ ಮುನ್ನ ಕೊಡುವುದು, ಯಾರ ಜೊತೆಗೂ ಮಾತನಾಡಲಾಗದಿರುವುದು, ಪ್ರಯಾಣ ಮಾಡುವಾಗ ಫೋಟೋ ತೆಗೆಯಲು ಬಿಡದಿರುವುದು, ನಿರ್ದಿಷ್ಟ ಸ್ಥಳ ಬಿಟ್ಟು ಉಳಿದೆಡೆ ಬಸ್ ನಿಲ್ಲಿಸದಿರುವುದು ಇವೆಲ್ಲವನ್ನೂ ಅನಿವಾರ್ಯ ಎಂದು ಬೇಸರ ಪಡದೆ ಅನುಭವಿಸಬೇಕು.

ಟಾಯ್ಲೆಟ್‌ಗಳ ಬಗ್ಗೆ ಒಂದು ಮಾತು. ಲಾಜಿಯಲ್ಲಿ ಮಾತ್ರ ವಿದೇಶೀ ಮಾದರಿ ಕಮೋಡ್ ಇವೆ. ಉಳಿದ ಕಡೆ ಕಾಂಗ್ಮಾ, ದೆರಾಪುಕ್‌ಗಳಲ್ಲಿ ಭಾರತೀಯ ಮಾದರಿ ಕಮೋಡ್ ಇವೆ. ಉಳಿದ ಎಲ್ಲೆಡೆ ಮೇಲೆ ವಿವರಿಸಿದ ಚೀನೀ ಟಾಯ್ಲೆಟ್ಟುಗಳೇ. ಹೀಗಾಗಿ, ಮೊಣಕಾಲು ನೋವು ಇರುವವರು ಗೊಣಗದೆ ನೋವು ಅನುಭವಿಸಬೇಕು.



ಟಿಬೆಟ್ ಭೂಪ್ರದೇಶ

### ದೃಶ್ಯವೈಭವ

ವಿಸ್ತಾರವಾದ ಬೋಳು ಬಯಲುಗಳು, ಏನೂ ಬೆಳೆಯದ ಪರ್ವತ ಶ್ರೇಣಿ, ಪರ್ವತಗಳಿಂದ ಹುಟ್ಟುವ ತೊರೆಗಳು ಹರಿಯುತ್ತ ಹರಿಯುತ್ತ ಕೊಳಗಳು, ನದಿಗಳಾಗುವುದು, ಪರ್ವತ ಭಿತ್ತಿಗಳಲ್ಲಿನ ತೆರೆತೆರೆಗಳಾದ ವಿನ್ಯಾಸಗಳು ನಮ್ಮನ್ನು ಮುಗ್ಧಗೊಳಿಸುತ್ತವೆ. ಉದ್ದಕ್ಕೂ ಉತ್ತಮ ವಿನ್ಯಾಸದೊಡನೆ ಚಿಕ್ಕ ಪಟ್ಟಣಗಳನ್ನು ನಿರ್ಮಿಸಲಾಗುತ್ತಿದೆ. ಬಹುಶಃ ಹಾನ್ ಚೀನೀಯರನ್ನು ಬಹುಸಂಖ್ಯೆಯಲ್ಲಿ ನೆಲೆಗೊಳಿಸಲಾಗುತ್ತಿದೆ. ರಸ್ತೆಗಳು ಬಿರುಕು ಬಿಟ್ಟೊಡನೆ ಟಾರ್ ಹಾಕಿ ಸರಿಪಡಿಸಲಾಗುತ್ತದೆ. ಕಣಿವೆಗಳಲ್ಲಿ ರೈಲ್ವೆ ಮಾರ್ಗದಂತೆ ಸಿದ್ಧಪಡಿಸಿದ ವೇದಿಕೆಯ ಮೇಲೆ ಅಚ್ಚುಕಟ್ಟಾದ ರಸ್ತೆ ನಿರ್ಮಾಣ. ಅಕ್ಕಪಕ್ಕ ನೀರು ಹರಿಯಲು ಕಾಲುವೆಗಳು. ಎಲ್ಲೂ ರೋಡ್ ಹಂಪ್‌ಗಳಿಲ್ಲ. ವೇಗ ತಗ್ಗಿಸಲು ಬಿಳಿ ಪಟ್ಟಿಗಳನ್ನು ರಸ್ತೆಯ ಮೇಲೆ ಬಳಿದಿರುವರು. ರಸ್ತೆಯ ಬಲಬದಿ ಉಪಯೋಗಿಸಿ ಹೋಗಬೇಕು. ವಾಹನಗಳು ಎಡದಿಂದ ಓವರ್‌ಟೇಕ್ ಮಾಡುವುವು. ಎಲ್ಲ ವಾಹನಗಳು ಎಡಬದಿ ಚಾಲಕ ಕೂರುವಂತಹವು. ನಮಗೆ ನೀಡಿದ್ದ ಎರಡು ಮಿನಿ ಬಸ್‌ಗಳು ಪ್ರಯಾಸವಿಲ್ಲದೆ ೯೦-೧೦೦ ಕಿ.ಮೀ. ವೇಗದಲ್ಲಿ ಹೋಗುತ್ತಿದ್ದ ಅತ್ಯಾಧುನಿಕ ವಾಹನಗಳು. ದಾರಿಯಲ್ಲಿ ಸಿಕ್ಕುತ್ತಿದ್ದ ಅತಿ ದೊಡ್ಡ ಲಾರಿಗಳು ಅಚ್ಚರಿ ತರುವಂತಹವು. ಪೆಟ್ರೋಲ್ ಬಂಕುಗಳ ಸಂಖ್ಯೆ ತೀರ ಕಡಿಮೆ. ಇಂಗ್ಲಿಷ್ ಅಕ್ಷರ ಕಾಣುತ್ತಿದ್ದುದು ಚೀನಾ ಮೊಬೈಲ್ ಹಾಗೂ ಎಬಿಸಿ ಬ್ಯಾಂಕ್‌ನವು ಮಾತ್ರ. ಚೀನಾದ ಪ್ರಗತಿ ಅದ್ಭುತ. ಮೊಬೈಲ್ ಸಿಗ್ನಲ್ ಎಲ್ಲೆಡೆ ಸಿಗುತ್ತಿತ್ತು.

### ಫೋನ್ ಸಮಸ್ಯೆ

ಐಎಸ್‌ಡಿ ಕಾರ್ಡ್ ಆಗಲಿ, ಮ್ಯಾಟ್ರಿಕ್ಸ್ ಕಾರ್ಡ್ ಆಗಲಿ ಇಲ್ಲಿ ಕೆಲಸ ಮಾಡದು. ಪಬ್ಲಿಕ್ ಟೆಲಿಫೋನಿನಿಂದ ಭಾರತಕ್ಕೆ ಮಾತನಾಡಲು ಆಗದು. ಮ್ಯಾಟ್ರಿಕ್ಸ್ ಕಾರ್ಡ್ ಇದ್ದಲ್ಲಿ ಭಾರತದಿಂದ ಒಳಬರುವ ಕರೆಗಳನ್ನು ಮಾತ್ರ ಸ್ವೀಕರಿಸಬಹುದು, ಅಷ್ಟೆ. ಚೀನಾದಿಂದ ಮನೆಯವರ ಜೊತೆ ಮಾತನಾಡಬಹುದೆಂಬ ಮಾರ್ಗ



ವಸತಿ ವ್ಯವಸ್ಥೆ ಹೀಗಿದೆ

ದರ್ಶಿ ಪುಸ್ತಕದ ಮಾಹಿತಿ ತಪ್ಪು. ಇನ್ನೊಂದು ಅತಿಮುಖ್ಯವಾದ ಅಂಶವೆಂದರೆ, ವಾಪಸಾಗುವಾಗ ಬ್ಯಾಗ್‌ಡೋಗ್ರಾದಿಂದ ಬೆಂಗಳೂರಿಗೆ ನೇರವಾಗಿ ಬರಬಹುದು, ದಿಲ್ಲಿಗೆ ವಾಪಸು ಹೋಗಬೇಕಾಗಿಲ್ಲ. ಈ ಪ್ರಯಾಣಕ್ಕೂ ಮುಂಚಿತವಾಗಿ ಬುಕ್ ಮಾಡಿದ್ದರೆ ಕಡಿಮೆ ಖರ್ಚಿನಲ್ಲಿ ವಿಮಾನ ಪ್ರಯಾಣ ಸಾಧ್ಯ. ನಾನು ಕೈಲಾಸ ಯಾತ್ರೆಗೆ ಮೊದಲು ಗ್ಯಾಂಗ್‌ಟೋಕ್‌ನಲ್ಲಿ ಈ ನಿರ್ಧಾರ ಕೈಗೊಂಡು ವಿಮಾನ ಪ್ರಯಾಣದ ಖರ್ಚನ್ನು ಕೊಟ್ಟಿದ್ದರೂ, ಸಿಕ್ಕಿಂ ಟೂರಿಸಂ ಡೆವಲೆಪ್‌ಮೆಂಟ್ ಕಾರ್ಪೊರೇಷನ್ನಿನವರು ನಾನು ಬಂದ ಮೇಲೆಯೆ ವಿಮಾನಕ್ಕೆ ಬುಕ್ ಮಾಡಿದ್ದು. ಹೀಗಾಗಿ ನನಗೆ ವಿಮಾನದ ಟಿಕೆಟ್‌ಗೆ ಹೆಚ್ಚು ಖರ್ಚಾಯಿತು.

ನನ್ನ ನಿರಾಸೆಯನ್ನು ಮೇಲೆ ಕಾಣಿಸಿದ್ದರೂ, ಉತ್ತರ ಭಾರತೀಯರ ಭಕ್ತಿಭಾವ ನನ್ನನ್ನು ಪ್ರಭಾವಿತಗೊಳಿಸಿತು ಎಂಬುದು ಸತ್ಯ. ಅವರೆಲ್ಲ ಕೈಲಾಸ ಪರ್ವತ ನೋಡಿ ಶಿವನನ್ನೇ ಕಂಡಷ್ಟು ಸಂತೋಷಪಟ್ಟರು. ಆದರೆ ಹಿಂದಿರುಗಿದ ಮೇಲೆ ಗ್ಯಾಂಗ್‌ಟೋಕ್‌ನಲ್ಲಿ ಕ್ಷುಲ್ಲಕ ವಿಷಯಗಳಿಗಾಗಿ ಅಷ್ಟೇ ತೀವ್ರತೆಯಿಂದ ಚರ್ಚಿಸಿ, ಜಗಳ ಮಾಡಿದರು! ಇನ್ನು ಯಾತ್ರೆಯ ಬಗೆಗಿನ ನನ್ನ ಅನುಭವಗಳನ್ನು ವಿವರಿಸುತ್ತೇನೆ.

## ಯಾತ್ರೆಯ ಅನುಭವಗಳು

೨೦೧೬ ಜುಲೈ ೯ರಂದು ಬೆಳಗ್ಗೆ ೧೧.೧೫ರ ಟಿಪ್ಪು ಎಕ್ಸ್‌ಪ್ರೆಸ್‌ನಲ್ಲಿ ಮೈಸೂರಿನಿಂದ ಬೆಂಗಳೂರಿಗೆ ಹೊರಟು, ಅಲ್ಲಿ ಸಂಜೆ ೬ರ ವಿಮಾನದಲ್ಲಿ ದೆಹಲಿಗೆ ಹೋದೆ. ಅಲ್ಲಿ ನನ್ನ ಮೊಬೈಲ್ ಕೆಲಸ ಮಾಡದ್ದರಿಂದ, ಯಾರನ್ನೂ ಸಂಪರ್ಕಿಸಲಾಗದೆ, ಮೆಟ್ರೋ ಹಿಡಿದು ಗುಜರಾತಿ ಸಮಾಜ ಸದನಕ್ಕೆ ಹೋಗುವಾಗ ರಾತ್ರಿ ೧೧ ಆಗಿತ್ತು. ದಿಲ್ಲಿ ಸ್ಥಳಗಳನ್ನು ದಿನವಿಡೀ ನೋಡಿ ಬಂದಿದ್ದ ನಮ್ಮ ಬ್ಯಾಚಿನ ಯಾತ್ರಿಗಳೆಲ್ಲರೂ ಮಲಗಿದ್ದುದರಿಂದ, ಖಾಲಿಯಿದ್ದ ಇನ್ನೊಂದು ಡಾರ್ಮೆಟರಿಯಲ್ಲಿ ಮಲಗಿದೆ. ಉಳಿದ ಮೂರು ದಿನಗಳೂ ಅದೇ ಜಾಗದಲ್ಲೇ ಉಳಿದೆ. ಊಟ, ತಿಂಡಿ, ಎ.ಸಿ. ಡಾರ್ಮೆಟರಿ ವಸತಿ ಉಚಿತ. ಆದರೆ ೪೫ ಜನಕ್ಕೆ ಎರಡು ಟಾಯ್ಲೆಟ್, ಎರಡು ಬಾತ್‌ರೂಂ. ನಮ್ಮ ಊರ್ಧ್ವಗಾಮೀ ಸಂಸ್ಕೃತಿ ಎಲ್ಲ ಸಂದರ್ಭಗಳಲ್ಲೂ ಅನ್ನದಾನಕ್ಕೆ ಹೆಚ್ಚಿನ ಮಹತ್ವ ನೀಡುತ್ತದೆ, ಹೆಚ್ಚಿನ ಸಂಖ್ಯೆಯ ಟಾಯ್ಲೆಟ್‌ಗಲ್ಲ! ಅನೇಕ ಯಾತ್ರಾ ಸಮಿತಿಗಳು ನಮಗೆ ತಿಂಡಿಗಳನ್ನೂ, ಶಿವಸ್ತೋತ್ರಗಳ ಪುಸ್ತಕಗಳು, ಸಿ.ಡಿ.ಗಳನ್ನೂ ಉಚಿತವಾಗಿ ಕೊಡುತ್ತಿದ್ದುವು! ಇನ್ನು ಟಾಯ್ಲೆಟ್ಟೋ ಆಧುನಿಕತೆಯ ಪ್ರತೀಕ. ಇಕ್ಕಟ್ಟಿನಲ್ಲಿ ಗ್ರಾನೈಟ್ ನೆಲದ ಮೇಲೆ ವಿದೇಶೀ ಮಾದರಿ ಕಮೋಡ್; ಟಿಶ್ಯೂ ಪೇಪರ್ ಇಲ್ಲ, ನೀರು ನಿಂತು ಕೊಚ್ಚೆ. ಷೂ, ಚಪ್ಪಲಿ ಹೊರಗೇ ಕಾರಿಡಾರಿನಲ್ಲಿ ಬಿಡಬೇಕು; ಬಾತ್‌ರೂಮಿನಲ್ಲಿ ಕೆಟ್ಟುನಿಂತ ಗೀಸರ್, ತಣ್ಣೀರು ಸ್ನಾನ. ಆಧುನಿಕತೆಗೆ ತೆರೆದುಕೊಂಡ ಮೇಲ್‌ಮಧ್ಯಮವರ್ಗದ ಸಂಕಟಗಳಿಗೆ ಸಮಾಜ ಸದನ ಮಾದರಿಯಾಗಿತ್ತು.

## ವೈದ್ಯಕೀಯ ತಪಾಸಣೆಗಳು

ಮರುದಿನ ಬೆಳಗ್ಗೆ ಖಾಲಿ ಹೊಟ್ಟೆಯಲ್ಲಿ ಡೆಲ್ಲಿ ಹಾರ್ಟ್ ಅಂಡ್ ಲಂಗ್ ಇನ್ಸ್‌ಟಿಟ್ಯೂಟಿನಲ್ಲಿ ಕಟ್ಟುನಿಟ್ಟಾದ ವೈದ್ಯಕೀಯ ತಪಾಸಣೆಗೆ ಒಳಗಾಗಿ, ಯಾತ್ರೆಗೆ ಎಲ್ಲ ವಿಧದಲ್ಲೂ ಯೋಗ್ಯನಿದ್ದೇನೆಂದು ಅವರು ತಿಳಿಸಿದಾಗ ಮಧ್ಯಾಹ್ನ ಮೂರು ಗಂಟೆ. ಟ್ರೆಡ್ ಮಿಲ್ ಟೆಸ್ಟಿನ ಮೊದಲು ಒಂದು ಇಡ್ಲಿ, ಒಂದು ವಡೆಯ ಅಲ್ಪಾಹಾರ ಕೊಟ್ಟರೂ, ತಪಾಸಣೆಗಳೆಲ್ಲ ಮುಗಿದ ಮೇಲೆ ಸಾಕಾಗುವಷ್ಟು ಊಟ ಹಾಕಿದರು. ಇಷ್ಟು ಸವಿವರವಾದ ಟೆಸ್ಟುಗಳು ಅಗತ್ಯ ಎಂಬುದು ಮುಂದಿನ ಯಾತ್ರೆಯ ಕಾಲಕ್ಕೆ ಅನುಭವಕ್ಕೆ ಬಂತು.

ಮರುದಿನ, ೧೧ರ ಬೆಳಗ್ಗೆ ದಕ್ಷಿಣಪುರಿಯಲ್ಲಿನ ಇಂಡೋ – ಟಿಬೆಟನ್ ಬಾರ್ಡರ್ ಪೊಲೀಸ್ (ಐಟಿಬಿಪಿ) ಆಸ್ಪತ್ರೆಯಲ್ಲಿ ಪುನಃ ನಮ್ಮ ವೈದ್ಯಕೀಯ ಸರ್ಟಿಫಿಕೇಟು ಸರಿಯಿದೆಯೇ ಎಂದು ತಪಾಸಣೆ. ಎಲ್ಲೋ ಸಾಬ್ (ಎಲ್. ಓ. – ಲಯಸನ್ ಆಫೀಸರ್) ಮನೋಜ್ ಯಾದವ್ ಸೇರಿ ೩೮ ಜನರಿಗೆ ಯಾತ್ರೆ ಹೊರಡಲು ಒಪ್ಪಿಗೆ ಸಿಕ್ಕಿತು. ಐದು ಜನಕ್ಕೆ ಅನುಮತಿ ನಿರಾಕರಿಸಲಾಯಿತು. ಹೋದ ವರ್ಷದ ಯಾತ್ರೆಯ ಫಿಲ್ಮ್ ಶೋ ತೋರಿಸಿದರು. ಎಚ್ಚರ ತಪ್ಪಿ ಬಿದ್ದರೆ ಹೇಗೆ ಕೃತಕ ಉಸಿರಾಟ, ಎದೆ ಒತ್ತಿ ಹೃದಯ ಮತ್ತೆ ಬಡಿದುಕೊಳ್ಳುವಂತೆ ಮಾಡುವುದು ಎಂಬುದರ ಪ್ರಾತ್ಯಕ್ಷಿಕೆ ಮಾಡಿಸಿದರು. ಫುಡ್, ಲಗೇಜ್, ಪೂಜಾ, ವಸತಿ ಹಾಗೂ ಫೈನಾನ್ಸ್ ಕಮಿಟಿಗಳನ್ನು ರಚಿಸಲಾಯಿತು. ನಾನು ಪೂಜಾ ಕಮಿಟಿಯಲ್ಲಿ ಸೇರಿದೆ. ಇನ್ನೊಂದು ತೀರ್ಥಯಾತ್ರಾ ಸಮಿತಿಯವರು ಊಟ, ಸೊಂಟಕ್ಕೆ ಕಟ್ಟುವ ಹಮ್ಮಿಣಿ, ಕೆಲವು ಪುಸ್ತಕಗಳು, ಹಣ್ಣು, ಕೈ ಕೋಲುಗಳನ್ನು ನೀಡಿದರು. ಅನಂತರ ಆರ್ಮಿ ಕ್ಯಾಂಟೀನಿನಲ್ಲಿ ವಿವಿಧ ವಸ್ತುಗಳನ್ನು ಕೊಂಡೆವು. ನಾನು ಬ್ಯಾಗು ಒಂದನ್ನು ಕೊಂಡೆ. ಅನಂತರ ದಿಲ್ಲಿಯಲ್ಲಿನ ಎಕ್ಸ್‌ಚೇಂಜ್ ಏಜೆಂಟ್ ಬಳಿ ೧೬೦೧ ಡಾಲರು ಹಾಗೂ ೩೦೦೦ ಯುವಾನ್ ಕೊಂಡೆವು. ದಾರಿಯಲ್ಲಿ ಖಾಸಗಿ ಆರ್ಮಿ ಸ್ಟೋರ್ ಒಂದರಲ್ಲಿ ನಮ್ಮವರು ತುಂಬಾ ವಸ್ತು ಗಳನ್ನು ಕೊಂಡರು. ನಾನು ಒಂದು ವಾಟರ್‌ಪ್ರೂಫ್ ಕ್ಯಾಪ್, ಗ್ಲೌಸ್ ಹಾಗೂ ಚಳಿಯ ಟೋಪಿ, ನನ್ನ



**ಮಾನಸ ಸರೋವರದ ದಂಡೆಯಲ್ಲಿ ವಸತಿ**

ಶ್ರೀಮತಿಗೆ ಒಂದು ಡ್ರೆಸ್ ಕೊಂಡೆ. ರಾತ್ರಿ ಊಟದ ಹೊತ್ತಿಗೆ ಗುಜರಾತಿ ಸದನಕ್ಕೆ ಹೋದೆವು.

ಜುಲೈ ೧೨ರಂದು ವಿದೇಶ ವ್ಯವಹಾರಗಳ ಮಂತ್ರಾಲಯದಲ್ಲಿ ಅಧಿಕಾರಿಗಳೊಂದಿಗೆ ಮಾತುಕತೆ. ಅಲ್ಲಿ ವಿಮಾನದ ಟಿಕೆಟ್ ಹಾಗೂ ಚೀನೀ ಗ್ರೂಪ್ ವೀಸಾ ಕೊಟ್ಟರು. ಗುಂಪಿನ ಖರ್ಚಿಗಾಗಿ ಪೂಲ್ ಮನಿ ಎಂದು ಎಲ್ಲರೂ ೭೦೦೦ ರೂ. ಕೊಟ್ಟೆವು. ಮಳೆ. ಅಲ್ಲಿನ ಕ್ಯಾಂಟೀನಿನಲ್ಲಿ ಹಣ ನೀಡಿ ಊಟ ಮಾಡಿದೆವು. ನೇರ ಸದನಕ್ಕೆ ಹೋದೆವು. ಗುಜರಾತಿ ಸದನದಲ್ಲಿ ನಾಲ್ಕು ದಿನ ಚೆನ್ನಾಗಿ ಕಳೆಯಿತು. ಈ ಸಂಜೆ ಸರಕಾರದ ವತಿಯಿಂದ ಭಜನೆ ಹಾಗೂ ಊಟ. ಅಲ್ಲದೆ, ಯಾವ ಅರ್ಜಿ ಮೊದಲಾದುವುಗಳಿಲ್ಲದೆ, ಎಲ್ಲರಿಗೂ ದಿಲ್ಲಿ ಸರಕಾರ ೪೦೦೦/-ರೂ. ಅನುದಾನ ನೀಡಿದರು. ಸಿಕ್ಕಿಂ ಟೂರಿಸಂ ಡೆವಲೆಪ್‌ಮೆಂಟ್ ಕಾರ್ಪೊರೇಷನ್‌ನ ಛೇತ್ರಿ ನಮ್ಮ ಆಗುಹೋಗುಗಳನ್ನು ನೋಡಿಕೊಳ್ಳುತ್ತಿದ್ದರು.

ಮರುದಿನ, ಜುಲೈ ೧೩ರಂದು ಬೆಳಿಗ್ಗೆ ಏಳು ಗಂಟೆಗೆ ವಿಮಾನ ನಿಲ್ದಾಣಕ್ಕೆ ಹೊರಟೆವು. ಕೈಲಾಸವಾಣಿ ಎಂಬ ಸಂಘಟನೆಯವರು ನಮಗೆಲ್ಲ ತಿಲಕವಿಟ್ಟು, ಉದ್ದನೆಯ ಮಫ್ಲರ್ ತರಹದ ಹಳದಿ ವಸ್ತ್ರ ಕುತ್ತಿಗೆಗೆ ಹಾಕಿ ಗೌರವಿಸಿ, ಕೈಗೆ ರುದ್ರಾಕ್ಷಿ ಮಾಲೆ, ಪುಸ್ತಕ, ಸಿಡಿ ಎಲ್ಲ ನೀಡಿ, ಓಂ ನಮಶ್ಶಿವಾಯ ಹೇಳಿದರು. ದಿಲ್ಲಿ ಸರಕಾರದ ಪ್ರತಿನಿಧಿ ಹಾಜರಿದ್ದರು. ಇನ್ನಾರೋ ಸೊಂಟಕ್ಕೆ ಕಟ್ಟುವ ಚೀಲ, ಅದರ ತುಂಬ ಔಷಧಿ, ಚಾಕಲೇಟು, ವ್ಯಾಸಲಿನ್ ಮೊದಲಾದುವನ್ನು ತುಂಬಿ ನೀಡಿದರು. ನಮ್ಮ ಗೋಏರ್ ವಿಮಾನ ೧೦.೫೦ಕ್ಕೆ ದಿಲ್ಲಿ ಬಿಟ್ಟು, ಬ್ಯಾಗ್‌ಡೋಗ್ರಾಕ್ಕೆ ೧೨.೩೦ಕ್ಕೆ ಬಂತು. ಐಟಿಬಿಪಿ ಹಾಗೂ ಸಿಕ್ಕಿಂ ಟೂರಿಸಂ ಡೆವಲೆಪ್‌ಮೆಂಟ್ ಕಾರ್ಪೊರೇಷನ್ನಿನವರು ನಮ್ಮನ್ನು ಸ್ವಾಗತಿಸಿದರು. ಎರಡು ಬಸ್ಸು, ಸಾಮಾನುಗಳಿಗಾಗಿ ವ್ಯಾನೊಂದರಲ್ಲಿ ಪ್ರಯಾಣ ಮಾಡಿ, ದಾರಿಯಲ್ಲಿ ಸಿಂಡರೆಲ್ಲಾ ಹೊಟೇಲಿನಲ್ಲಿ ಹೊಟ್ಟೆತುಂಬಾ ಊಟ ಮಾಡಿದೆವು. ಇಲ್ಲಿಂದ ಮುಂದಕ್ಕೆ ಎಸ್‌ಟಿಡಿಸಿಯವರದ್ದೇ ವಾಹನ, ವಸತಿ, ಊಟತಿಂಡಿ, ಯೋಗಕ್ಷೇಮದ ಅಚ್ಚುಕಟ್ಟಾದ ನಿರ್ವಹಣೆ. ಇನ್ನೂ ನಾಲ್ಕು ಗಂಟೆ ಪಯಣಿಸಿ, ಐದು ಗಂಟೆಗೆ ಸಿಕ್ಕಿಂನ ಗ್ಯಾಂಗ್‌ಟೋಕ್ ತಲುಪಿದೆವು. ಎಸ್‌ಟಿಡಿಸಿಯವರ ಆಫೀಸು ಇರುವ ಹೊಟೇಲ್ ಮಯೂರದಲ್ಲಿ ನಾವು ಇಪ್ಪತ್ತು ಜನ, ಅದೇ ಸಾಲಿನ ಐದು ಮನೆ ಆಚೆ ಇರುವ ಮೌಂಟ್ ಜೊಪುನೊ ಹೊಟೇಲಿನಲ್ಲಿ ಉಳಿದವರ ವಾಸ್ತವ್ಯ. ಊಟ ತಿಂಡಿ ಅಲ್ಲಲ್ಲೇ.

## ಮೊದಲ ನಿಲುತಾಣ

ಬೆಳಿಗ್ಗೆ ಸ್ನಾನಾದಿ ನಿತ್ಯಕರ್ಮಗಳನ್ನು ಮುಗಿಸಿ, ಸೊಗಸಾದ ತಿಂಡಿ ತಿಂದಮೇಲೆ ನಮ್ಮ ಪ್ರಯಾಣ ಅಲ್ಲಿಂದ ೧೦,೪೦೦ ಅಡಿ ಎತ್ತರದಲ್ಲಿರುವ ಹದಿನೈದನೇ ಮೈಲು ಎಂಬ ಪರ್ವತ ವಾತಾವರಣಕ್ಕೆ ಹೊಂದಿಕೊಳ್ಳುವ ನಿಲುತಾಣಕ್ಕೆ. ಇಲ್ಲಿ ರೂಮುಗಳಿಲ್ಲ, ಡಾರ್ಮಿಟರಿಗಳಲ್ಲಿ ನಮಗೆಲ್ಲ ಸ್ಥಳ ನೀಡಿದರು. ಊಟ ಸೊಗಸಾಗಿತ್ತು. ೨೫ ಜನ ಸ್ವಲ್ಪ ದೂರದ ವಸತಿಯಲ್ಲಿ, ೧೩ ಮಂದಿ ಊಟ ಮಾಡಿದ ಕಟ್ಟಡದ ಮೇಲ್ಭಾಗದಲ್ಲಿ. ಸ್ನಾನದ ಮನೆ, ಸಂಡಾಸು ಚೆನ್ನಾಗಿದ್ದುವು. ಕೀಟಬಾಧೆ. ಬೆಳಗ್ಗೆ ಸ್ನಾನದ ಮನೆ ತುಂಬ ತುಂಬಿಕೊಂಡಿದ್ದ ಕೀಟಗಳ ನಡುವೆ ಸ್ನಾನ ಮಾಡುವುದು ಕಷ್ಟವಾಯಿತು. ನಮ್ಮ ಜೊತೆಯಲ್ಲಿದ್ದ ಶಿಬಪ್ರಸಾದ್ ತಂದೆಗೆ ಅನಾರೋಗ್ಯ; ನಡುಗತೊಡಗಿದರು. ಡಾಕ್ಟರು ಬಂದು ಔಷಧ ಕೊಟ್ಟು ಒಂದು ಗಂಟೆ ಅವರನ್ನು ನೋಡಿಕೊಳ್ಳುತ್ತ ಇದ್ದರು. ಅನಂತರ, ಕೆಳಗೆ ಗ್ಯಾಂಗ್ಟೋಕ್‌ಗೆ ಮರಳಿ, ವೈದ್ಯಪರೀಕ್ಷೆಗೆ ಒಳಪಡಲು ಸಲಹೆ ನೀಡಿದರು. ಅವರಿಗೆ ಮುಂದಕ್ಕೆ ಪ್ರಯಾಣ ಮಾಡುವ ಆತ್ಮವಿಶ್ವಾಸ ಕಳೆದುಹೋಗಿ, ಅಳುತ್ತ ತನ್ನನ್ನು ಹಿಂದಕ್ಕೆ ಕರೆದೊಯ್ಯಲು ಮಗನನ್ನು ಕೇಳಿಕೊಂಡರು. ಮಗನಿಗೆ ಯಾತ್ರೆಯ ಅವಕಾಶ ತಪ್ಪಿಹೋದ ಸಂಕಟ. ತಾನೂ ಅಳುತ್ತ, ಎಲ್ಲರಿಗೂ ಶುಭ ಹಾರೈಸುತ್ತ, ತನ್ನ ತಂದೆಯನ್ನು ಗ್ಯಾಂಗ್ಟೋಕ್‌ಗೆ ಕರೆದೊಯ್ದರು. ಅಲ್ಲಿ ಆ ವೃದ್ಧರು ಮೊದಲಿನಂತೆ ಆದರೆಂದು ಸುದ್ದಿ ಬಂತು. ಉತ್ತಮ ಸಂಘಟಕರಾದ ಶಿಬಪ್ರಸಾದ್ ದಿಲ್ಲಿಯಲ್ಲಿ, ಅನಂತರದ ಪ್ರಯಾಣದಲ್ಲಿ ಚೆದುರಿಹೋಗದಂತೆ ಗುಂಪನ್ನು ನಿಭಾಯಿಸುತ್ತ, ಇಳಿಯಲು, ಸಾಮಾನು ಸಾಗಿಸಲು ನೆರವಾಗುತ್ತ, ಚಟುವಟಿಕೆಯಿಂದ ಎಲ್ಲರ ಗಮನ ಸೆಳೆದಿದ್ದರು. ಡೆಲ್ಲಿ ಹಾರ್ಟ್ ಅಂಡ್ ಲಂಗ್ ಇನ್‌ಸ್ಟಿಟ್ಯೂಟಿನಲ್ಲಿ ಶ್ವಾಸಕೋಶದ ಶಕ್ತಿಯನ್ನು ಅಳೆಯುವ ಪರೀಕ್ಷೆಯಲ್ಲಿ ಅವರ ತಂದೆ ಗಟ್ಟಿಯಾಗಿ ಊದಲು ಅಸಮರ್ಥರಾದಾಗ, ಧೈರ್ಯ ತುಂಬಿ, ಸಹಾನುಭೂತಿಯಿಂದ ಸಹಕಾರ ನೀಡಿದ್ದರು. ತನ್ನ ತಂದೆಯನ್ನು ಮರಳಿ ಜಬ್ಬಲ್ಪುರಕ್ಕೆ ಕರೆದೊಯ್ದರೆಂದು ತಿಳಿಯಿತು. ಇನ್ನು ಮುಂದಕ್ಕೆ ನಮಗೆಲ್ಲ ಏನು ಕಷ್ಟ ಕಾದಿದೆಯೋ ಎಂದು ಆತಂಕ ಎಲ್ಲರಿಗೂ.

ಜುಲೈ ೧೫ರಂದೂ ಇಲ್ಲೇ ವಾಸ್ತವ್ಯ. ಬೆಳಗ್ಗೆ ತಿಂಡಿ ತಿಂದು, ದುರ್ಗೆಯನ್ನು ರಕ್ಷಣೆಗೆ ಹೊಂದಿದ ಸೋಮ್‌ಗೋ ಸರೋವರಕ್ಕೆ ಹೊರಟೆವು. ದಂಡೆಯಲ್ಲಿ ನಾಲ್ಕಾರು ಯಾಕ್ ಪ್ರಾಣಿಗಳು. ಎಲ್ಲರೂ ಯಾಕ್ ಸವಾರಿ ಮಾಡಿದ್ದೇ ಮಾಡಿದ್ದು. ಬಾಡಿಗೆಯೂ ಕಡಿಮೆ, ಪ್ರಾಣಿಗಳೂ ಸಾಧು. ಮೂಗು ಬಿಟ್ಟು ಉಳಿದೆಲ್ಲವನ್ನೂ ಬಟ್ಟೆಯಿಂದ ಮುಚ್ಚಿಕೊಂಡ ಯಾಕ್ ಒಡತಿಯರು, ಬೇರೆ ಸಾಮಗ್ರಿಗಳನ್ನು ಮಾರುವ ಹುಡುಗಿಯರು. ದೇವಿ ದುರ್ಗೆಯ ಪುಟ್ಟ ದೇವಸ್ಥಾನ. ರಾಜರುಗಳು ಎಲ್ಲ ಹಬ್ಬಗಳಲ್ಲಿ ಇಲ್ಲಿಗೆ ಬಂದು ಪೂಜೆ ಸಲ್ಲಿಸುತ್ತಿದ್ದರಂತೆ. ಮಳೆ ಇಲ್ಲದ್ದರಿಂದ ಸಮಯ ಚೆನ್ನಾಗಿ ಕಳೆಯಿತು. ಊಟಕ್ಕೆ ನಮ್ಮ ವಸತಿಗೆ ಹಿಂದಿರುಗಿದೆವು. ಸಣ್ಣಪುಟ್ಟ ವಸ್ತುಗಳನ್ನು ಕೊಳ್ಳಲು ಕೆಲವರು ತಿರುಗಾಡಿದರು. ರಾತ್ರಿ ಚಳಿ ಬಹಳ, ಎಷ್ಟೋ ಸಮಯ ನಿದ್ದೆ ಬರಲಿಲ್ಲ. *(ಮುಂದುವರಿಯುವುದು)*

# ಶ್ರೀಮಾತೆ

ಮೂಲ ಬಂಗಾಳಿ : **ಆಶುತೋಷ್ ಮಿತ್ರ**                ಅನುವಾದ : **ಸ್ವಾಮಿ ಜ್ಞಾನಯೋಗಾನಂದ**

## ಭಾಗ ೧೦

ಶ್ರೀಮಾತೆಯವರ ಒಬ್ಬ ಸೇವಕ ಅನಿರೀಕ್ಷಿತವಾಗಿ ಜಯರಾಮಬಾಟಿಗೆ ಬಂದ. ಶ್ರೀಮಾತೆ ಅವನನ್ನು ಕಂಡು ಆಶ್ಚರ್ಯಚಕಿತರಾಗಿ ಕೇಳಿದರು, ''ನೀನು ಬಂದುಬಿಟ್ಟೆಯಲ್ಲ, ಹೋಗಿಲ್ಲವೆ?'' ಆ ಸೇವಕ ಹೇಳಿದ, ''ನಿಮಗೆ ಪತ್ರ ಬರೆದಿದ್ದೆನಲ್ಲ–'' ಶ್ರೀಮಾತೆ, ''ನೀನು ಬದರಿನಾರಾಯಣ ನೋಡಿಕೊಂಡು, ಅನಂತರ ಬಂದುಬಿಡು ಅಂತ ನಾನು ಬರೆದಿದ್ದೆ'' ಎಂದರು. ಅದಕ್ಕೆ ಸೇವಕ, ''ಆರು ದಿನ ಕಾದು, ನಿಮ್ಮ ಪತ್ರ ಬರಲಿಲ್ಲ ಅಂತ ನೇರ ಮರಳಿ ಬಂದುಬಿಟ್ಟೆ'' ಎಂದ. ಆಗ ಶ್ರೀಮಾತೆ, ''ಪೆದ್ದು ಹುಡುಗ! ಎರಡು ದಿನ ಇರಲಾಗಲಿಲ್ಲವೆ? ಋಷೀಕೇಶದಿಂದ ಪತ್ರ ಬಂದು ಹೋಗಲು ಆರು ದಿನ ಬೇಕಾಗುತ್ತದೇನು? ಈ ಬೆಳಗಿನ ಹೊತ್ತು ಎಲ್ಲಿಂದ ಬಂದೆ? ಯಾವ ದಾರಿಯಲ್ಲಾಗಿ ಬಂದೆ?'' ಎಂದು ಕೇಳಿದರು. ಸೇವಕ, ''ನಿನ್ನೆ ಸಾಯಂಕಾಲ ವರ್ಧಮಾನದಲ್ಲಿ ಬಂದಿಳಿದೆ, ಅಲ್ಲಿಂದ ನೇರ ಇಲ್ಲಿಗೇ ಬಂದೆ'' ಎಂದ.

ಶ್ರೀಮಾತೆ, ''ಇಡೀರಾತ್ರಿ ನಡೆದುಕೊಂಡೇ ಬಂದೆಯಾ? ವರ್ಧಮಾನವೆಂದರೆ ಹತ್ತಿರವೇನು? ಹೋಗು, ಚೆನ್ನಾಗಿ ಎಣ್ಣೆ ಹಚ್ಚಿ ಸ್ನಾನ ಮಾಡಿ ಬಾ. ಇಲ್ಲದಿದ್ದರೆ ನೆಗಡಿಯಾದೀತು. ಇಂದು ಸಿಂಹವಾಹಿನಿಯ ಪೂಜೆ ವರದನ ಪಾಲಿಗೆ. ಒಂದು ಆಡು ಬಂದಿದೆ, ಮಹಾಪ್ರಸಾದ (ಆಡಿನ ಮಾಂಸ, ದೇವಿಗೆ ಅರ್ಪಿಸಿದ ಪ್ರಸಾದ) ತಂದಿದ್ದಾನೆ. ನಾನು ಅಡುಗೆ ಮಾಡಲು ಹೋಗುತ್ತೇನೆ. ಊಟವೆಲ್ಲ ಮುಗಿದ ಮೇಲೆ ಮಧ್ಯಾಹ್ನದ ಹೊತ್ತು ನಿನ್ನ ವಿಷಯವನ್ನೆಲ್ಲ ಹೇಳು'' ಎಂದರು. ಅನಂತರ ನಳಿನಿಗೆ, ''ನಿನ್ನಣ್ಣ ಸ್ನಾನ ಮಾಡಿ ಬಂದರೆ, ತಿನ್ನಲು ಕಡಲೆಪುರಿ ಕೊಡು'' ಎಂದರು. ಪಕ್ಕದಲ್ಲಿದ್ದ ಕುಂಜ ಎಂಬ ಕೆಲಸದವನಿಗೆ, (ಕೃಷಿ ಇತ್ಯಾದಿ ಕೆಲಸ ಮಾಡುತ್ತಿದ್ದ) ''ನಿನ್ನಣ್ಣ, ಇಡೀರಾತ್ರಿ ನಡೆದು ಬಂದಿದ್ದಾನೆ. ಅವನಿಗೆ ಚೆನ್ನಾಗಿ ಎಣ್ಣೆ ಹಚ್ಚಿಕೊಡು'' ಎಂದರು. ಮಧ್ಯಾಹ್ನ ಶ್ರೀಮಾತೆ ಹಾಗೂ ಆ ಸೇವಕನ ನಡುವೆ ನಡೆದ ಮಾತುಕತೆಯ ವಿಷಯ ಸಂಗ್ರಹವಾಗಿ ಹೀಗಿತ್ತು:

ಸೇವಕ ಶ್ರೀಮಾತೆಯವರ ಅನುಮತಿಯೊಂದಿಗೆ ಬದರೀನಾಥಕ್ಕೆ ಯಾತ್ರೆ ಹೊರಟಿದ್ದ. ಅವನೊಂದಿಗೆ ಒಬ್ಬ ಸಾಧು ಕೂಡ ಇದ್ದ, ಆದರೆ ಅವನು ಶ್ರೀಮಾತೆಯವರ ಶಿಷ್ಯನಲ್ಲ, ಬೇಲೂರು ಮಠದ ನಿವಾಸಿಯೂ ಅಲ್ಲ. ಅವರಿಬ್ಬರೂ ಋಷೀಕೇಶಕ್ಕೆ ಹೋಗಿ, ಅಲ್ಲಿ ಧನರಾಜ ಗಿರಿಯ ಕೈಲಾಸಾಶ್ರಮದಲ್ಲಿ ಅತಿಥಿಯಾಗಿದ್ದರು. ಬೆಳಿಗ್ಗೆ ಎದ್ದು ಜೊತೆಗಾರನು ಇನ್ನೂ ನಿದ್ರಿಸುತ್ತಿದ್ದುದನ್ನು ನೋಡಿ, ಸೇವಕನು ಶೌಚಾದಿ ಕಾರ್ಯಗಳನ್ನು ಮುಗಿಸಿ, ಆ ಸಾಧು



ಝೂಡಿ[೧]ಯೊಳಗಿದ್ದುದನ್ನು ನೋಡಿ, ತಾನು ಮಾತ್ರವೇ ತಿರುಗಾಡಲು ಹೊರಟ. ನೋಡುತ್ತಿದ್ದಂತೆ, ಝೂಡಿಯ ಉತ್ತರ ಭಾಗದ ಎಲ್ಲೆಯನ್ನು ತಲುಪಿದಾಗ ಆತ ಅಲ್ಲೊಂದು ಕರುಣಾಮಯವಾದ ಆರ್ತನಾದವನ್ನು ಕೇಳಿದ. ಅಲ್ಲಿ ಗಮನಕೊಟ್ಟು ಕೇಳಿದಾಗ, ಆ ಗುಹೆಯ ಬಾಗಿಲಿನ ಬಳಿಯಲ್ಲಿ ಗೊತ್ತಾಯಿತು, ಅದೊಂದು ಸ್ತ್ರೀ ಧ್ವನಿ ಎಂದು. ಸೇವಕ ಕುತೂಹಲದಿಂದ ಆ ಗುಹೆಯನ್ನು ಪ್ರವೇಶಿಸಿದ. ಅಲ್ಲಿ ಒಬ್ಬಾಕೆ ನೇಪಾಳೀ ಸಂನ್ಯಾಸಿನಿ ಬಿದ್ದುಬಿಟ್ಟಿದ್ದಳು. ಅವಳು ಮೃತ್ಯುಮುಖದಲ್ಲಿದ್ದಾಳೆ; ಒಂದೇ ಸಮನೆ ಕಿರುಚುತ್ತಿದ್ದಾಳೆ. ''ಯೇ ಮಾಯೀ, ಯೇ ಮಾಯೀ, ಅಭೀತಕ್ ನಹಿ ಭೇಜಿ?'' ('ಓ ಅಮ್ಮಾ, ಓ ಅಮ್ಮಾ, ಇಲ್ಲಿಯತನಕವೂ ಕಳುಹಿಸಿಕೊಡಲಿಲ್ಲ ನೀನು') ಅಂತ. ಅಲ್ಲಿ ನಿಂತಿದ್ದ ಸೇವಕನತ್ತ ದೃಷ್ಟಿ ಹರಿಸಿದ ಕೂಡಲೇ ಆಕೆ ಹಿಂದಿಯಲ್ಲಿ ಕೇಳಿದಳು,

---

೧ ಸಾಧುಗಳು ಸಣ್ಣ ಅಥವಾ ದೊಡ್ಡ ಗುಹೆಗಳನ್ನು ನಿರ್ಮಿಸಿ ವಾಸ ಮಾಡುವ ಸ್ಥಳವೇ 'ಝೂಡಿ'. ಝೂಡಿ ಎರಡು ರೀತಿ – ದೊಡ್ಡದು, ಚಿಕ್ಕದು. ಗುಹೆಗಳು ನೋಡುವುದಕ್ಕೆ ಧಾನ್ಯದ ಒಟ್ಟಿನಂತಿರುತ್ತವೆ. ಅದನ್ನು 'ಪುಶ್' ಎನ್ನುತ್ತಾರೆ.

''ಬಂದೆಯಾ? ಬೇಗನೆ ಬಾ. ನನ್ನ ಬಳಿ ಕುಳಿತುಕೋ. ನಾನು ಹೇಳಿದಂತೆಯೇ ಮಾಡು. ನನಗಿನ್ನು ಹೆಚ್ಚು ಹೊತ್ತು ಉಳಿದಿಲ್ಲ'' ಎಂದಳು. ಅದನ್ನು ಕೇಳಿದ ಸೇವಕ ಸ್ತಂಭೀಭೂತನಾದ. ಏನು ಬಯ್ಯುತ್ತಿದ್ದಾಳೆ! ಬಹುಶಃ ಕಳವಳದಿಂದ ಬಯ್ಯುತ್ತಿರಬೇಕು. ಏನೇ ಇರಲಿ, ನೋಡೋಣ ಎಂದುಕೊಂಡು ಅವಳ ಬಳಿಗೆ ಹೋಗಿ ಕುಳಿತ. ಆ ನೇಪಾಳೀ ಹೆಂಗಸಿಗೆ ಪ್ರಜ್ಞೆ ಇನ್ನೂ ಚುರುಕಾಗಿತ್ತು. ಆಕೆ ಹೇಳತೊಡಗಿದಳು: ''ಸಂದೇಹಪಡಬೇಡ. ಶ್ರೀಮಾತೆಯವರನ್ನು ಕೇಳು, ಅವರು ತಮ್ಮ ಒಬ್ಬ ಶಿಷ್ಯನನ್ನು ನನ್ನ ಕೊನೆಯ ಕ್ಷಣದಲ್ಲಿ ಕಳುಹಿಸುವುದಾಗಿ ಮಾತುಕೊಟ್ಟಿದ್ದರು'' ಎಂದಳು. ಸೇವಕ ದಿಗ್ಭ್ರಮೆಗೊಂಡಿದ್ದ, ಅಥವಾ ಈ ಅಲೌಕಿಕ ಸಂಗತಿ ಹೇಗೆ ಕೊನೆಗೊಳ್ಳುವುದೋ ಎಂಬುದನ್ನು ನೋಡಲು ಉತ್ಸುಕನಾಗಿದ್ದ!

''ಈಗ ನಾನು ಹೇಳಿದಂತೆ ಮಾಡು'' ಎಂದ ಆ ನೇಪಾಳಿ ಮಾತೆ ತನ್ನ ತಲೆದಿಂಬಿನತ್ತ ಕೈ ತೋರಿಸಿದಳು. ಸೇವಕನು ಆ ಭಾಗದಲ್ಲಿ ಇಪ್ಪತ್ತನಾಲ್ಕು ರೂಪಾಯಿ ಹಾಗೂ ದೇವನಾಗರಿ ಅಕ್ಷರದಲ್ಲಿ ಬರೆದಿದ್ದ ಒಂದು ಸಣ್ಣ ಗ್ರಂಥವನ್ನು ಕಂಡ. ಆಕೆ ಹೇಳಿದಳು, ''ನಾನು ಸತ್ತುಹೋದರೆ ನನ್ನ ಶರೀರವನ್ನು ಸಾಧುಗಳ ಸಹಾಯದಿಂದ ಗಂಗೆಯಲ್ಲಿ ವಿಸರ್ಜನೆ ಮಾಡು. ನಾಲ್ಕನೇ ದಿನ ಈ ಹಣದಿಂದ ಸಾಧುಗಳಿಗೆ ಒಂದು ಭಂಡಾರ (ಸಂತರ್ಪಣೆ) ಏರ್ಪಡಿಸು. ಗ್ರಂಥವನ್ನು ಮೂರು ದಿನದ ಒಳಗಾಗಿ ಕಂಠಪಾಠ ಮಾಡು. ಮೂರನೇ ದಿನ ಸಂಜೆಯೊಳಗಾಗಿ ಅದನ್ನು ಗಂಗೆಯಲ್ಲಿ ಎಸೆದುಬಿಡು. ಆ ಮಂತ್ರಗಳನ್ನು ಮುಂದಿನವರ, ಇತರರ ಹಿತಕ್ಕಾಗಿ ಅನುಷ್ಠಾನ ಮಾಡು. ಎಂದಿಗೂ ನಿನಗೋಸ್ಕರ ಮಾಡಬೇಡ.''

ಆಕೆಯ ಸಮೀಪದಿಂದ ಐದು ನಿಮಿಷ ಅವಕಾಶ ಮಾಡಿಕೊಂಡು, ಸೇವಕನು ಧನರಾಜಗಿರಿಯ ಆಶ್ರಮಕ್ಕೆ ವೇಗವಾಗಿ ಮರಳಿದ. ಅಲ್ಲಿ ತನ್ನ ಜೊತೆಗಾರ ಸಾಧುವನ್ನು ಕಾಣದಿದ್ದಾಗ, 'ಅವನೊಬ್ಬನೇ ಬದರಿಕಾಶ್ರಮಕ್ಕೆ ಹೋಗಲಿ' ಎಂದು ಅಲ್ಲಿನವರಿಗೆ ತಿಳಿಸಿದ. ತನಗೆ ಹೋಗುವುದು ಅಸಾಧ್ಯ; ಸಹಜವಾಗಿ ತಾನು ಬಂಗಾಳಕ್ಕೆ ಮರಳಿ ಹೋಗಬೇಕಾಗುವುದು ಎಂದ.

ಮರಳಿ ಬಂದಾಗ ಆ ಮಾತೆಯ ಕೊನೆಯ ಗಳಿಗೆ ಬಂದಿತ್ತು. ''ಏ ಮಾಯಿ, ಏ ಮಾಯಿ'' ಎನ್ನುತ್ತ ಆ ನೇಪಾಳೀ ಮಾತೆ ದೇಹತ್ಯಾಗ ಮಾಡಿದಳು. ಸೇವಕನು ಅವಳ ಅಂತ್ಯಕ್ರಿಯೆ ಮುಗಿಸಿ, ಕಾಲೀ ಕಂಬಲೀವಾಲನ ಧರ್ಮಶಾಲೆಗೆ ಹೋಗಿ, ಅಧ್ಯಕ್ಷರಾದ ನಾಥಜೀಯವರನ್ನು ಭೇಟಿಯಾದ. ನೇಪಾಳೀ ಮಾತೆಯ ಹಣವನ್ನು ಅವರಲ್ಲಿ ಪಾವತಿಸಿ, 'ಭಂಡಾರ'ಕ್ಕೆ ವ್ಯವಸ್ಥೆ ಮಾಡಿದ. ಅನಂತರ ಧರ್ಮಶಾಲೆಯಲ್ಲಿ ಒಂದು ಕೋಣೆಯನ್ನು ಪಡೆದುಕೊಂಡು, ಆ ಗ್ರಂಥದಲ್ಲಿದ್ದ ಮಂತ್ರಗಳನ್ನು ಕಂಠಪಾಠ ಮಾಡತೊಡಗಿದ. ಕೋಣೆಗೆ ಹೋದ ಮೇಲೆ, ಮೊದಲು ಮಾಡಿದ ಕೆಲಸವೇ, ಬೇರಾರಿಗೂ ತಿಳಿಯದಂತೆ ಶ್ರೀಮಾತೆಯವರಿಗೆ ಒಂದು ಪತ್ರ ಬರೆದ. 'ತಾನು ಮರಳಿ ಬರಲೆ?' ಎಂದು ಅವರನ್ನು ಕೇಳಿದ. ಅನುಷ್ಠಾನ ಪದ್ಧತಿಗಳೊಂದಿಗೆ ಆ ಶ್ಲೋಕಗಳನ್ನು ಕಂಠಪಾಠ ಮಾಡಿದ ಬಳಿಕ, ಸರಿಯಾದ ಸಮಯದಲ್ಲಿ ಆ ಗ್ರಂಥವನ್ನು ಗಂಗೆಯಲ್ಲಿ ವಿಸರ್ಜನೆ ಮಾಡಿದ. ನೇಪಾಳೀ ಮಾತೆ ತೀರಿಕೊಂಡ ದಿನಾಂಕದಿಂದ ಆರು ದಿನಗಳ ತನಕ ಹೃಷಿಕೇಶದಲ್ಲಿ ಶ್ರೀಮಾತೆಯವರ ಪತ್ರವನ್ನೇ ನಿರೀಕ್ಷಿಸುತ್ತಾ ಕಳೆದ. ಅವರ ಪತ್ರ ಬರಲಿಲ್ಲ; ಆದ್ದರಿಂದ ಕೂಡಲೇ ಜಯರಾಮಬಾಟಿಗೆ ಮರಳಿ ಬಂದ.

ಈ ಕಥೆಯನ್ನೆಲ್ಲ ಕೇಳಿದ ಶ್ರೀಮಾತೆ ಹೇಳಿದರು: ''ಹೌದು, ಅವಳು ನನ್ನಿಂದ ಮಾತು ತೆಗೆದುಕೊಂಡಿದ್ದಳು. ಕೊನೆಯ ಕ್ಷಣದಲ್ಲಿ ಒಬ್ಬನಲ್ಲ ಒಬ್ಬ ಶಿಷ್ಯನನ್ನು ಕಳುಹಿಸಬೇಕು ಅಂತ. ಆ ಹುಡುಗಿ ತುಂಬಾ ಒಳ್ಳೆಯವಳು. ಅವಳಿಗೆ ಅನೇಕ ರೀತಿಯ ಸಾಧನೆಗಳು ಗೊತ್ತಿದ್ದವು. ಕಾಶಿಯಲ್ಲಿದ್ದಾಗ ಅವಳು ನನ್ನ ಬಳಿಗೆ ಬರುತ್ತಿದ್ದಳು. ಪಂಚತಪ ಮಾಡಬೇಕೆಂದು ನನಗೆ ಹೇಳಿದ್ದಳು.'' ''ಆ ಸಾಧನೆಗಳನ್ನೆಲ್ಲ ತಾನು ಮಾಡಬಹುದೆ?'' ಎಂದು ಸೇವಕ ನೇಪಾಳೀ ಮಾತೆ ಕೊಟ್ಟಿದ್ದ ಗ್ರಂಥದಲ್ಲಿ ಹೇಳಿದ್ದ ಸಾಧನೆಗಳ ಬಗ್ಗೆ ಕೇಳಿದ. ಶ್ರೀಮಾತೆ ಹೇಳಿದರು, ''ಮಾಡಬಹುದಲ್ಲ? ಯಾವುದರಿಂದ ಜಗತ್ತಿಗೆ ಉಪಕಾರವಾಗುವುದೋ ಅದನ್ನು ಮಾಡಬೇಕು. ಆದರೂ, ನಿನ್ನ ಮನಸ್ಸು ಒಪ್ಪಿದರೆ ಮಾಡು, ಇಲ್ಲದಿದ್ದರೆ ಬೇಡ.''

ಇನ್ನೊಂದು ದಿನ ಶ್ರೀಮಾತೆ ತಮ್ಮ ಕೋಣೆಯಲ್ಲಿ ಕುಳಿತು ಗಿರೀಶಚಂದ್ರನು ಜಯರಾಮಬಾಟಿಗೆ ಬಂದ ಘಟನೆಯನ್ನು ಕುರಿತು ಹೇಳುತ್ತಿದ್ದರು. ಹಳ್ಳಿಯ ಜನರು ಮೂರ್ಖರು — ಗಿರೀಶಬಾಬು ಥಿಯೇಟರ್ ನಡೆಸುತ್ತಿದ್ದ ಎಂದು ಕೇಳಿದ್ದ ಅವರು, ಅವನು ಚೆನ್ನಾಗಿ ಹಾಡಬಲ್ಲ ಎಂದು ಭಾವಿಸಿದ್ದರು. ಹೀಗಾಗಿ ಅವನು ಹಾಡಬೇಕೆಂದು ಅವರೆಲ್ಲ ಒತ್ತಾಯಿಸಿದರು. ತನಗೆ ಹಾಡಲು ಬರುವುದಿಲ್ಲವೆಂದು ಗಿರೀಶ ಎಷ್ಟೇ ಹೇಳಿದರೂ, ಅವರು ಬಿಡಲಿಲ್ಲ; ಆ ಕ್ಷಣದಲ್ಲೇ ಹಾಡಬೇಕೆಂದು ಅವನಿಗೆ ದುಂಬಾಲು ಬಿದ್ದರು. ಅವರನ್ನು ತೃಪ್ತಿಪಡಿಸುವುದಕ್ಕಾಗಿ ಅವನು ಎರಡು ಹಾಡುಗಳನ್ನು ಹಾಡಿದ. ಶ್ರೀಮಾತೆಯವರು ಈ ಘಟನೆಯನ್ನು ವರ್ಣಿಸಿ ಹೇಳಿದಾಗ ಶ್ರೀಮಾತೆಯವರನ್ನೇ ಹಾಡಲು ಒತ್ತಾಯಿಸಬೇಕೆಂದು ನನಗೆ ಆಸೆಯಿದ್ದಿತು. ಆ ಎರಡು ಹಾಡುಗಳಲ್ಲಿ ಯಾವುದಾದರೂ ಒಂದನ್ನು ಹಾಡಬೇಕೆಂದು ನಾನು ಅವರನ್ನು ಪೀಡಿಸತೊಡಗಿದೆ. ಮೊದಲು ಶ್ರೀಮಾತೆ ಹಿಂದೆಮುಂದೆ ನೋಡತೊಡಗಿದರು. ಬಹಳ ಹೊತ್ತು ಒತ್ತಾಯಿಸಿದ ಮೇಲೆ, ಮನೆಯ ಹೊರಗೆ ಬೇರೆ ಯಾರೂ ಇಲ್ಲವೆಂದು ಖಚಿತಪಡಿಸಿಕೊಂಡು ಈ ಕೆಳಗಿನ ಎರಡು ಸಾಲುಗಳನ್ನಷ್ಟೇ ಅವರು ಹಾಡಿದರು:

ಹಾಮಾ ದೇ ಪಾಲಾಯ್ ಪಾಛು ಫಿರೇ ಚಾಯ್
ರಾಣೀ ಪಾಛೇ ತೋಲೇ ಕೋಲೇ
ರಾಣೀ ಕುತೂಹಲೇ ಧೊರೊ ಧೊರೊ ಬೊಲೇ,
ಹಾಮಾ ಟೇನೇ ತೊತೊ ಗೋಪಾಲ್ ಚಲೇ

*(ಓಡಿಹೋಗುವನು ಗೋಪಾಲ ಮಡಿಲಿಂದ*
*ರಾಣಿ (ಯಶೋದೆ) ಅವನನು ಮತ್ತೆ ಹಿಡಿವಳೆಂದು;*
*ಕಳ್ಳನೋಟವ ಬೀರಿ ಓಡುವವನ*

*ಕಂಡಾಕೆ ಕೂಗುವಳು 'ಹಿಡಿ, ಹಿಡಿ' ಎಂದು–*
*ಮತ್ತೆ ಹೊರಳುವನವನು ದೂರ ಸಾಗಿ)*

ಶ್ರೀಮಾತೆಯವರ ಕಂಠ ಬಹಳ ಮಧುರವಾಗಿತ್ತು ನಿಜ; ಆದರೂ ಅದರಲ್ಲಿ ತುಸು ಗ್ರಾಮೀಣ ಛಾಯೆ ಅಡಗಿದೆಯೆಂದು ಹಾಡನ್ನು ಕೇಳಿದಾಗ ನನಗನ್ನಿಸಿತು.

ಶ್ರೀಮಾತೆ ಒಂದು ಸಲ ತಮ್ಮ ಓದು ಬರಹ ವಿಚಾರವಾಗಿ ತಿಳಿಸಿದ್ದರು. ಕಾಮಾರಪುಕುರದ ಸೊಸೆಯಾಗಿ ಬಂದ ಬಳಿಕ, ಮನೆಯ ಒಳಗೇ ಅಡಗಿದ್ದುಕೊಂಡ ಅವರು ಲಕ್ಷ್ಮೀ ದೀದಿಯ ಜೊತೆಗೆ ಓದುತಿದ್ದರು; ಲಕ್ಷ್ಮೀ ದೀದಿ ಶಾಲೆಗೆ ಹೋಗಿ ಕಲಿತು, ಬಂದ ನಂತರ ಶ್ರೀಮಾತೆಗೆ ಕಲಿಸುತ್ತಿದ್ದಳು — ಇತ್ಯಾದಿ. ಅದನ್ನು ಕೇಳಿ, ಅವರಿಂದ ಏನನ್ನಾದರೂ ಬರೆಸಬೇಕೆಂಬ ಬಯಕೆ ನನ್ನ ಮನಸ್ಸಿನಲ್ಲಿ ಮೂಡಿತು. ಅದಕ್ಕಾಗಿ ನಾನು ಹಠ ಹಿಡಿದು ಕುಳಿತೆ. ಅವರೂ ಬರೆಯಲಾರರು, ನಾನೂ ಬಿಡಲಾರೆ. ಕೊನೆಗೆ, ''ಹಾಗಾದರೆ ನಿನ್ನ ಹೆಸರು ಬರೆಯುತ್ತೇನೆ'' ಎಂದ ಶ್ರೀಮಾತೆ, ನಾನು ತಂದುಕೊಟ್ಟ ಕಾಗದದಲ್ಲಿ ಬರೆದರು. ಆಗಿನಿಂದ ಆ ಬರಹ ನನ್ನ ಬಳಿಯೇ ಇದೆ.

ಒಮ್ಮೊಮ್ಮೆ ಹುಚ್ಚು ಮಾಮಿಗೆ ಕಾರ್ಡ್ ಆಡುವ ಹುಚ್ಚು ಹತ್ತಿ ಬಿಟ್ಟರೆ, ಆಟ ಆಡಲು ಶ್ರೀಮಾತೆಯವರನ್ನು ಪೀಡಿಸುತ್ತಿದ್ದಳು. ಬಹಳಷ್ಟು ಪೀಡಿಸಿದ ನಂತರ ಕೂಡ ಶ್ರೀಮಾತೆ ಆಡದೆ ಹೋದರೆ, ಅವರ ಎರಡೂ ಕಾಲುಗಳನ್ನು ಹಿಡಿದು ಅವರನ್ನು ಒಪ್ಪಿಸುತ್ತಿದ್ದಳು. ಆಗ ಶ್ರೀಮಾತೆ, ''ನಾನು ಬೇಡವೆಂದರೂ ಒಪ್ಪಿಸಿದೆ. ಆದರೆ ಆಟಕ್ಕೆ ಇನ್ನೂ ಇಬ್ಬರು ಬೇಕಲ್ಲ? ಯಾರನ್ನು ಕರೆಯುವಂತೆ?'' ಎಂದಾಗ ಆಕೆ, ''ನಳಿನಿಯನ್ನು ಕರೆಯುತ್ತೇನೆ, ಹಾಗೇ ಆಶು ಹೊರಗಿದ್ದಾನಲ್ಲ, ಅವನನ್ನೂ ಕರೆಯುತ್ತೇನೆ'' ಎಂದು ನಮ್ಮನ್ನು ಕರೆಯುತ್ತಿದ್ದಳು. ಶ್ರೀಮಾತೆಯವರ ಬಳಿಗೆ ಹೋದಾಗ, ಅವರ ಕೋಣೆಯ ಹೊರಜಗಲಿಯಲ್ಲಿ ಚಾಪೆ ಹಾಸಿ, ಹುಚ್ಚುಮಾಮಿ ಹಾಗೂ ನಳಿನಿ ಕಾರ್ಡು ಕೈಯಲ್ಲಿ ಹಿಡಿದು ಕುಳಿತಿದ್ದರು. ಒಳಗಿನಿಂದ ಶ್ರೀಮಾತೆ ಹೇಳಿದರು, ''ಬಾ, ಕಾರ್ಡ್ ಆಡಲೇಬೇಕಂತೆ – ಹುಚ್ಚಿಯ ಹಠ ನೋಡು.'' ಆಗ ನಾನು ಮಾಮಿಗೆ ಹೇಳಿದೆ, ''ಶ್ರೀಮಾತೆಯವರ ಜೊತೆಗೆ ನಾನು ಒಂದು ತಂಡವಾಗದಿದ್ದರೆ ನಾನು ಆಡಲಾರೆ.'' ಅದಕ್ಕೆ ಅವರು ಒಪ್ಪಿದರು. ಆಟ ಆರಂಭವಾಯಿತು. ಗ್ರಾಬು ಆಟ, ಮೊದಲ ಬಾರಿಯೇ ಆರು ಹೊಡೆದೆ. ಮಾಮಿ ಕೋಪಿಸುತ್ತ ಆರಂಭಿಸಿದಳು. ಅನಂತರ ಐದು ಬಾರಿ ನನಗೆ ಐದು ಬಿತ್ತು. ಮಾಮಿಯ ಕೋಪ ಧಗಧಗಿಸ ಲಾರಂಭಿಸಿತು. ಐದು ಬಿದ್ದಾಗ ಎಲೆಗಳನ್ನು ಬಿಸಾಡಿ ಆಕೆ ಹೊರಟುಹೋದಳು. ಹೋಗುವಾಗ, ''ನೀವೆಲ್ಲಾ ಒಂದೇ ಸಮನೆ ಗೆಲ್ಲುತ್ತೀರಿ, ಗೊತ್ತು. ಅಮ್ಮಾ, ನಾನಾದರೂ ಸೋಲುವೆನೆ? – ಖಂಡಿತ ಇಲ್ಲ'' ಎಂದಳು. ಅದಕ್ಕೆ ಶ್ರೀಮಾತೆ, ''ನಾವು ಸತ್ವಪಥದಲ್ಲಿದ್ದೇವೆ, ಸಾತ್ವಿಕರು ನಾವು. ನಾವು ಗೆಲ್ಲುವೆವಲ್ಲದೆ, ಮತ್ತೆ ನೀನು ಗೆಲ್ಲುವಿಯೇನು?'' ಎಂದರು. ದೂರದಿಂದ ಮಾಮಿ, ''ಹೌದಮ್ಮಾ, ಹೌದು'' ಎಂದಳು.

ಶ್ರೀರಾಮಕೃಷ್ಣರ ಶಾಲೆಯ ಸಹಪಾಠಿ ಗಣೇಶ ಘೋಷಾಲ್ ಮಹಾಶಯನ ಮನೆ ಕಾಮಾರಪುಕುರದಲ್ಲೇ ಇತ್ತು. ನಾನು ಕಾಮಾರಪುಕುರಕ್ಕೆ ಹೋದಾಗ ಅವನು ನನಗೆ ಏನೇನೋ ತಿನ್ನಿಸುತ್ತಿದ್ದ; ಪ್ರೀತಿಯಿಂದ 'ಹನುಮಾನ್' ಎಂದು ಕರೆಯುತ್ತಿದ್ದ. ಒಂದು ದಿನ ಅವನು ನನ್ನೊಂದಿಗೆ ಆನೂರು ಹಾಗೂ ರಾಜಪುರದ ಮೂಲಕ ಶ್ರೀಮಾತೆಯವರ ದರ್ಶನ ಪಡೆಯಲು ಜಯರಾಮಬಾಟಿಗೆ ಬಂದಿದ್ದ. ಶ್ರೀಮಾತೆ ಕೊರಳಿಗೆ ಸೆರಗು ಸುತ್ತಿಕೊಂಡು ಅವನಿಗೆ ನಮಸ್ಕಾರ ಮಾಡಲು ಹೊರಟರೆ ಆತ, ''ನೀವು ನನ್ನ ತಾಯಿ, ಎಂದಾದರೂ ಹೀಗೆ ಮಾಡುವುದುಂಟೆ? ಮಕ್ಕಳಿಗೆ ಅದರಿಂದ ಅಮಂಗಳವುಂಟಾದೀತು'' ಎನ್ನುತ್ತಾ ಮೊಣಕಾಲು ಬಾಗಿಸಿ ಅವರಿಗೆ ಪ್ರಣಾಮ ಮಾಡಿದ.

ಮಹಾಪ್ರಸಾದದಿಂದ ಹಿಡಿದು, ಶ್ರೀಮಾತೆ ಮಾಡಿದ ಎಲ್ಲ ಬಗೆಯ ಅಡುಗೆಯನ್ನೂ ನಾನು ಊಟ ಮಾಡಿದ್ದೇನೆ. ನಾವು ಕಲ್ಕತ್ತೆಯ ಹುಡುಗರು. ಅವರು ಅಡುಗೆಯಲ್ಲಿ ನಿಷ್ಣಾತರು, ಅವರ ಅಡುಗೆ ನಿಜಕ್ಕೂ ಕಲ್ಕತ್ತೆಯ ಅಡುಗೆಯಂತೆಯೇ ಎಂದು ನಾನು ಹೇಳಬಲ್ಲೆ.

ಜಯರಾಮಬಾಟಿಯಲ್ಲಿ ಒಂದು ದಿನ ಅತ್ಯಂತ ಕುತೂಹಲಕರವಾದ ಘಟನೆ ನಡೆಯಿತು. ಬೆಳಗಿನ ಹೊತ್ತು ನಾನು ಶೌಚಾದಿಗಳನ್ನು ಮುಗಿಸಿ, ಹಿಂದಿರುಗಿ ಬರುವಾಗ ಶ್ರೀಮಾತೆಯ ಜನ್ಮಸ್ಥಳದ ಬಳಿ, ನೀರು ತುಂಬಿದ ಒಂದು ಪ್ರದೇಶದಲ್ಲಿ ಹೇರಳವಾಗಿ ಕಪ್ಪುಬಣ್ಣದ ಕೆಸುವಿನೆಲೆ ಬೆಳೆದಿತ್ತು. ಇತ್ತೀಚಿನ ಜನರು ಎಂಥ ಹೆಡ್ಡರು, ಈ ಕೆಸುವಿನೆಲೆಯಿಂದ ಅಡುಗೆ ಮಾಡಬಹುದು ಎಂದು ಅವರಿಗೆ ಗೊತ್ತೇ ಇಲ್ಲ ಎಂದು ನಾನು ಭಾವಿಸಿದೆ. ಇಲ್ಲದಿದ್ದರೆ ಇಷ್ಟೊಂದು ಎಲೆಗಳು ಇಲ್ಲಿ ಹೇಗೆ ಉಳಿದಿದ್ದಾವು? ಯಾರಾದರೂ ಅವನ್ನು ಕೊಯ್ದು ಒಯ್ಯುತ್ತಿದ್ದರು. ನಾನು ಹೀಗೆ ಭಾವಿಸುತ್ತ, ಸಾಕಷ್ಟು ಎಲೆಗಳನ್ನು ಕಿತ್ತು, ಅವುಗಳನ್ನು ಬೆನ್ನ ಹಿಂದೆ ಕಟ್ಟಿಕೊಂಡು ಶ್ರೀಮಾತೆಯವರ ಬಳಿಗೆ ಹೋದೆ. ಅದನ್ನು ನೋಡಿದ ಅವರು ನಗು ತಡೆಯಲಾಗದೆ, ಆದರೂ (ಸಹಜವಾಗಿ, ಶಿಷ್ಯನಿಗೆ ನೋವು ಉಂಟಾಗದಿರಲೆಂದು) ಪ್ರಕಟವಾಗಿ, ''ಈ ಕಡೆಯ ಜನರಿಗೆ ಕೆಸುವಿನ ಎಲೆ ತಿಂದು ಗೊತ್ತಿಲ್ಲ. ಅಡುಗೆ ಮಾಡಲಂತೂ ಬರುವುದೇ ಇಲ್ಲ. ಇರಲಿ, ನಾನು ಅಡುಗೆ ಮಾಡುತ್ತೇನೆ'' ಎಂದರು. ಅನಂತರ ಕೇಳಿದರು, ''ಇದೆಲ್ಲಿ ಸಿಕ್ಕಿತು?'' ನಾನೆಂದೆ, ''ಬಾಂಡೂಜಿಯವರ ಜಮೀನಿನ ಮುಂದೆ, ನೀರಿನ ಪ್ರದೇಶದಲ್ಲಿ ಬೆಳೆದಿತ್ತು.''

''ನೀರಿನಲ್ಲಿ ಬೆಳೆದ ಎಲೆಯ? ಅದು ತುಂಬಾ ಕಡಿದೀತು! ಪೆದ್ದು ಹುಡುಗ! ನೀರಿನ ಕೆಸುವಿನೆಲೆ ತಿಂದರೆ ತುರಿಕೆಯಾದೀತು ಅಂತ ಗೊತ್ತಿಲ್ಲವೆ?'' ಎಂದರು ಶ್ರೀಮಾತೆ. ನನ್ನ ಬೆನ್ನೆಲ್ಲ ಬಾತುಕೊಂಡಿತ್ತು; ಎರಡೂ ಕೈಗಳಲ್ಲೂ ಅದೇ ಅವಸ್ಥೆ! ಕೂಡಲೇ ಅವರು ಎಣ್ಣೆ ತಂದು ಹಚ್ಚಲು ಕುಳಿತರು. ಕಕ್ಕಾಬಿಕ್ಕಿಯಾದ ನಾನು, ''ಹೀಗೆ ಬಾತುಕೊಂಡಿದ್ದರಿಂದ, ಅಥವಾ ತುರಿಕೆಯುಳ್ಳ ಕೆಸುವಿನ ಎಲೆಗೆ ನಾನು ಕ್ಯಾರ್ ಮಾಡಲಾರೆ; ಆದರೂ ನೀವು ಈ ರೀತಿ

ಹಿಂಜರಿದದ್ದು ನನ್ನ ಮನಸ್ಸಿನಲ್ಲಿ ಉಳಿದೀತು — ಇನ್ನು ಹೀಗೆ ಯಾವತ್ತೂ ಮಾಡಲಾರೆ'' ಎಂದೆ. ಎಣ್ಣೆ ಹಚ್ಚಿದ ಮೇಲೆ ಶ್ರೀಮಾತೆ, ''ಈಗಲೇ ಹೋಗಿ ಸ್ನಾನ ಮಾಡಬೇಡ. ಎಣ್ಣೆ ಮೊದಲು ಆರಿ ಹೋಗಲಿ. ಮೊದಲೇ ಅದಕ್ಕೆ ನೀರು ತಗಲಿದರೆ ಅದು ಮತ್ತೆ ಕಡಿದೀತು'' ಎಂದರು.

ನಂತರ ಅವರು ಈಳಿಗೆಮಣೆ, ಕೆರೆಯುವ ಮಣೆ, ತೆಂಗಿನ ಕಾಯಿ ಇವನ್ನೆಲ್ಲ ತಂದು, ತಮ್ಮೆರಡೂ ಕೈಗಳಿಂದ ಎಣ್ಣೆಯನ್ನು ತೆಗೆದುಕೊಂಡು, ಕೆಸುವಿನೆಲೆ ಹೆಚ್ಚಲು ಕುಳಿತರು. ಕೂಡಲೇ ನಾನು ತೆಂಗಿನಕಾಯಿ ಒಡೆದು, ಕೆರೆಯಲು ಆರಂಭಿಸಿದೆ. ಊಟ ಮಾಡುವಾಗ ಅವರು ತುಂಬಾ ಕೆಸುವಿನ ಪಲ್ಯವನ್ನು ಬಡಿಸಿದರು. ತುಂಬ ಒಳ್ಳೆಯ ಅಡುಗೆ, ಸ್ವಲ್ಪವೂ ಕಡಿಯುತ್ತಿರಲಿಲ್ಲ. ನಾನು ಕೇಳಿದಾಗ ತಿಳಿಯಿತು, ಮೂರು ಸಲ ಅವರು ಹುಣಸೆಯೊಂದಿಗೆ ಬೇಯಿಸಿ, ಅದನ್ನು ಹಿಂಡಿ, ನೀರನ್ನು ಎಸೆದು ಬಿಟ್ಟಿದ್ದರಂತೆ; ಆಮೇಲೆ ಅದನ್ನು ಅಡುಗೆ ಮಾಡಿದರಂತೆ.

ಮಾಘಮಾಸವದು; ತುಂಬಾ ಚಳಿ. ಬೆಳಗಿನ ಹೊತ್ತು ಹೊರ ಜಗಲಿಯಲ್ಲಿ ಕುಳಿತು ನಾವೆಲ್ಲ ಬಿಸಿಲಿಗೆ ಚಳಿ ಕಾಯಿಸುತ್ತಿದ್ದೆವು. ಹಿಂದಿನ ದಿನ ಶಿರೋಮಣಿಪುರದಲ್ಲಿ ಸಂತೆಯಿತ್ತು. ಹಾಗೆ ಸಂತೆ ಯಿದ್ದ ಮರುದಿನ, ಪ್ರತಿಬಾರಿಯೂ ಜಯರಾಮಬಾಟಿಯಲ್ಲಿ ತರಕಾರಿ ಮಾರಲು ಒಬ್ಬಾಕೆ ಹೆಂಗಸು ಅಲ್ಲಿಗೆ ಬರುತ್ತಿದ್ದಳು. ಶ್ರೀಮಾತೆ ಹಣಕೊಟ್ಟು ಅವಳಿಂದ ತರಕಾರಿ ಕೊಂಡುಕೊಳ್ಳು ತ್ತಿದ್ದರು. ಅಜ್ಜಿ (ಶ್ರೀಮಾತೆಯವರ ತಾಯಿ) ಅವಳಿಗೆ ಧಾನ್ಯ, ಸಾಸಿವೆ ಮೊದಲಾದವನ್ನೆಲ್ಲ ಮಾರಿ ತರಕಾರಿ ಕೊಂಡುಕೊಳ್ಳು ತ್ತಿದ್ದರು. ಇಂದೂ ಆ ಹೆಂಗಸು ಅಲ್ಲಿಗೆ ಬಂದಳು. ಅಜ್ಜಿ ಏನೋ ಸ್ವಲ್ಪ ಕೊಂಡುಕೊಂಡರು. ಅನಂತರ ಅವರು ಶೌಚಕ್ಕೆ ಹೋದರು. ಅಲ್ಲಿಂದ ಬಂದು ಉಗ್ರಾಣದಲ್ಲಿ ಧಾನ್ಯ ಕುಟ್ಟುತ್ತಿದ್ದಲ್ಲಿಗೆ ಹೋಗಿ, ಅಲ್ಲಿದ್ದವರ ಜೊತೆಗೆ ಅವರೂ ಸೇರಿಕೊಂಡು ಕೆಲಸ ಪೂರೈಸಿದರು. ಮತ್ತೆ ಅವರು ಶೌಚಕ್ಕೆ ಹೋದರು. ಮರಳಿ ಬಂದ ಮೇಲೆ ಅವರು ಕಾಳೀಮಾಮನ ಮನೆಯ ಪಡಸಾಲೆಯಲ್ಲಿ ಮಲಗಿಬಿಟ್ಟರು. ಅಲ್ಲಿಂದ ಕೂಗಿ ಹೇಳಿದರು, ''ತಮ್ಮಾ, ಇನ್ನು ನಾನು ಉಳಿಯ ಲಾರೆ. ತಲೆಯೊಳಗೆ ಏನೋ ಆಗುತ್ತಿದೆ. ಬಿಟ್ಟು ಬಿಡು, ಸುಮ್ಮನೆ ಹತ್ತಿರ ಕುಳಿತುಕೋ'' ಎಂದರು. ನಾನು ಶ್ರೀಮಾತೆಯವರನ್ನು ಕರೆದುಕೊಂಡು ಬಂದೆ. ಅವರು ಅಲ್ಲಿಗೆ ಬಂದು ಕೇಳಿದರು, ''ಏನು ಕಷ್ಟವಾಗುತ್ತದಮ್ಮಾ?'' ಅವರು ನಾಡಿ ಪರೀಕ್ಷೆ ಮಾಡಲು ಹೇಳಿದರು. ನಾನು ಪರೀಕ್ಷೆ ಮಾಡಿ ಹೇಳಿದೆ, ''ವಯಸ್ಸಾಗಿದೆ, ಏನೂ ಹೇಳಲಾಗದು.'' ಆಗ ಅಜ್ಜಿಯ ಗಂಡುಮಕ್ಕಳು ಯಾರೂ ಸಮೀಪದಲ್ಲಿರಲಿಲ್ಲ. ಮತ್ತೊಮ್ಮೆ ಅವರು ಶೌಚಕ್ಕೆ ಹೋದರು. ಶ್ರೀಮಾತೆ ಅವರನ್ನು ಹಿಡಿದುಕೊಂಡು ಕಲೂಪುಕುರಿನ ತೀರಕ್ಕೆ ಕರೆದುಕೊಂಡು ಹೋದರು. ಅಜ್ಜಿ ಮರಳಿ ಬಂದು, ''ಕುಂಬಳ ಕಾಯಿ ಪಲ್ಯ ತಿನ್ನಬೇಕು ಅನ್ನಿಸುತ್ತಿದೆ'' ಎಂದರು. ಅದಕ್ಕೆ ಶ್ರೀಮಾತೆ, ''ಕುಂಬಳಕಾಯಿಯಂತೂ ಭಾರೀ ಒಳ್ಳೆಯ ವಸ್ತು. ಮೊದಲು ನಿಮಗೆ ಗುಣವಾಗಲಿ, ಆಮೇಲೆ ಊಟ ಮಾಡ ಬಹುದು'' ಎಂದರು. ಅಜ್ಜಿ ಮತ್ತೆ ಮಲಗಿದರು.

ಅವರೆಂದರು, ''ಇನ್ನು ತಿನ್ನುವುದು ಸಾಧ್ಯವಿಲ್ಲ. ಮೊಮ್ಮಗನ ಕೈಯಿಂದ ನೀರು ಕುಡಿಯುತ್ತೇನೆ.'' ಶ್ರೀಮಾತೆ ಕೂಡಲೇ ಗಂಗಾ ಜಲವನ್ನು ತೆಗೆದುಕೊಂಡು ಬಂದರು. ಮೂರು ಸಲ ಅವರಿಗೆ ನೀರು ಕುಡಿಸಿದೆ. ಶ್ರೀಮಾತೆಗೂ ನೀರು ಕೊಡಲು ಹೇಳಿದೆ, ಅವರೂ ಕುಡಿಸಿದರು. ಮತ್ತೆ ಅವರ ನಾಡಿ ಪರೀಕ್ಷಿಸಿದೆ. ನನಗೆ ನಾಡಿ ಸಿಗಲಿಲ್ಲ. ಶ್ರೀಮಾತೆಗೆ ಅದನ್ನು ಹೇಳಿದೆ. ಆಗ ಅವರು ಅಜ್ಜಿಯ ಹಣೆ ಹಾಗೂ ಎದೆಯ ಮೇಲೆ ಕೈಯಿಟ್ಟು ಜಪ ಮಾಡಿ ದರು. ಜಪ ಮಾಡುತ್ತಿದ್ದಂತೆಯೇ ಅಜ್ಜಿಯ ಎರಡೂ ಕಣ್ಣುಗಳು ಮೇಲಕ್ಕೆ ಹೋದವು; ಅವರ ಇಹಲೀಲೆ ಅಂತ್ಯಗೊಂಡಿತು. ಮನೆ ಯಲ್ಲಿ ಜೋರಾಗಿ ಅಳುವ ಸದ್ದು ತುಂಬಿಕೊಂಡಿತು. ಆಗ ಸುಮಾರು ಒಂಬತ್ತು ಗಂಟೆ.

ವರದ ಮಾವ ಕೂಡ ಆಗ ಗದ್ದೆಯಲ್ಲಿದ್ದರು. ಅವರನ್ನು ಕರೆ ತರಲಾಯಿತು. ಕಾಳೀಮಾವ ಮೊರಗೇಡಿನಲ್ಲಿದ್ದರು. ಅವರಿಗೆ ಸುದ್ದಿ ತಲುಪಿಸಲಾಯಿತು. ಸುದ್ದಿ ಕೇಳಿದ ಅವರೆಲ್ಲ ಒಟ್ಟು ಸೇರಿ ದರು. ತಕ್ಕ ಸಮಯದಲ್ಲಿ ಆಮೋದರ ನದೀತೀರದಲ್ಲಿ ಅಜ್ಜಿಯ ಅಂತ್ಯಕ್ರಿಯೆ ನಡೆಯಿತು.

ಅಜ್ಜಿಗೆ ಸಂಬಂಧಿಸಿದಂತೆ ನಾನು ಏನೆಲ್ಲ ಕೇಳಿದ್ದೆನೋ ಅವ ನ್ನೆಲ್ಲ ಇಲ್ಲಿ ಹೇಳುತ್ತೇನೆ. ಅಜ್ಜಿ ತನ್ನ ಮಗಳ (ನಮ್ಮ ಶ್ರೀಮಾತೆಯ) ವಿವಾಹದ ವಿಷಯದಲ್ಲಿ ಮೊದಮೊದಲು ಅಷ್ಟೇನೂ ಸಮಾ ಧಾನ ಹೊಂದಿರಲಿಲ್ಲ. ಅವರು ಯಾವಾಗಲೂ 'ಒಬ್ಬ ಹುಚ್ಚ ನೊಡನೆ' ಮಗಳ ಮದುವೆ ಮಾಡಿ ಕೊಟ್ಟಿದ್ದಕ್ಕೆ ಆಕ್ಷೇಪ ಮಾಡುತ್ತ, ''ಹುಡುಗಿಯ ಕೈಕಾಲು ಕಟ್ಟಿ ನೀರಿಗೆ ಹಾಕಿಬಿಟ್ಟೆ'' ಎನ್ನುತ್ತಿದ್ದರು. ಶ್ರೀಮಾತೆಯವರ ಸಾಂಸಾರಿಕ ಪರಿಸ್ಥಿತಿ ಉತ್ತಮಗೊಳ್ಳುವವರೆಗೆ, ಶ್ರೀಮಾತೆಯವರಿಗೋಸ್ಕರ ಅಜ್ಜಿಯೇ ಅವರ ಬಳಿಗೆ ಬಂದು ವಾಸ ಮಾಡುವವರೆಗೆ ಆ ಬೈಗುಳ, ಆಕ್ಷೇಪಗಳೆಲ್ಲ ಅವರಲ್ಲಿ ಪ್ರಬಲವಾಗಿದ್ದವು. ಇಲ್ಲಿ ಇದನ್ನು ಹೇಳುವುದು ಒಳಿತು: ಅವರು ಎಂದಿಗೂ ಶ್ರೀಮಾತೆಯವರನ್ನು ತಮ್ಮ ಪತಿಯ ಬಳಿಗೆ ಕಳುಹಿಸ ಲಿಲ್ಲ. ಶ್ರೀಮಾತೆ ತಮ್ಮದೇ ಪ್ರೇರಣೆಗೆ ಅನುಗುಣವಾಗಿ ಹೋಗಿ ಬಂದು ಮಾಡುತ್ತಿದ್ದರು. ಆದರೆ ಮುಂದೆ ಅಜ್ಜಿಯ ಸಂಸಾರದಲ್ಲಿ ಧನ, ಧಾನ್ಯ ಇವೆಲ್ಲ ಸಮೃದ್ಧಗೊಂಡಾಗ, ಅವರ ಮೊಮ್ಮಕ್ಕಳ (ಅಂದರೆ, ಶ್ರೀಮಾತೆಯವರ ಶಿಷ್ಯಂದಿರ) ಮೇಲೆ ಒಂದು ಬಗೆಯ ಮಾಯೆ ಕಾಣಿಸಿಕೊಂಡಾಗ, ಅವರಿಗೆ ಅವರ ಮೇಲೆ ಒಂದು ರೀತಿಯ ಸ್ನೇಹ ಮೂಡಿಬರತೊಡಗಿತು. ಕೊನೆಗೆ ಅವರ ಸಂಸಾರ ಅಜ್ಜಿಯ ಮುಂದೆ 'ಮೊಮ್ಮಕ್ಕಳ ಸಂಸಾರ'ವಾಗಿ ಬದ ಲಾಯಿತು. ಆಗ ತಮ್ಮ ಸಂಸಾರದಲ್ಲಿ ಶಿವನಿದ್ದಾನೆ, ಬ್ರಹ್ಮನಿದ್ದಾನೆ, ವಿಷ್ಣು ಇದ್ದಾನೆ ಎಂದು ಅವರಿಗೆ ಅನ್ನಿಸತೊಡಗಿತು. ಈ ವಿಷಯ ದಲ್ಲಿ ನನಗೇನು ತಿಳಿದಿತ್ತೋ ಅದನ್ನಿಲ್ಲಿ ಬರೆದಿದ್ದೇನೆ.

*(ಮುಂದುವರಿಯುವುದು)*



# ಕೂರೇಶರ ಗುರುಭಕ್ತಿ

ಪುಷ್ಪಾ ಶೇಷಾದ್ರಿ

ಗುರುವಿನ ಶ್ರೇಷ್ಠತೆಯನ್ನು ಶಿಷ್ಯಂದಿರ ಗುಣಗಳ ಮೂಲಕ ನೋಡಬೇಕು ಎನ್ನುತ್ತಾರೆ. ಅಸಾಧಾರಣ ಬುದ್ಧಿ ಶಕ್ತಿ, ದಯಾರ್ದ್ರ ಹೃದಯ, ನಿರ್ಭೀತಿ, ಗುರುಭಕ್ತಿ ಮೊದಲಾದ ಗುಣಗಳಿಂದ ಕೂಡಿದ ಕೂರೇಶರು ಮೇಲಿನ ಮಾತಿಗೆ ಅತ್ಯುತ್ತಮ ನಿದರ್ಶನ. ಅವರ ಗುರು ಶ್ರೀ ರಾಮಾನುಜರ ಸಹಸ್ರಮಾನೋತ್ಸವದ ಸಂದರ್ಭದಲ್ಲಿ ಅತ್ಯಂತ ಪ್ರಸ್ತುತವಾದ ಈ ಲೇಖನವನ್ನು ಬರೆದ ಲೇಖಕಿ ಮೈಸೂರಿನ ನಿವಾಸಿಹಾಗೂ ಆಶ್ರಮದ ಭಕ್ತರು. ಸರಳ ಹಾಗೂ ಸುಲಲಿತ ಶೈಲಿಯಲ್ಲಿ ಬರೆಯುವ ಅವರ ಅನೇಕ ಲೇಖನಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ.

ಶ್ರೀರಾಮಾನುಜರ ಶಿಷ್ಯ-ಭಕ್ತರಲ್ಲಿ ಕೂರೇಶನು ಒಬ್ಬನು. ಬ್ರಾಹ್ಮಣಕುಲದಲ್ಲಿ ಜನಿಸಿದವನು. ಬಹಳ ದೊಡ್ಡ ಸಾಹುಕಾರ. ಕಾಂಚೀಪುರದ ಹತ್ತಿರ ಕುರುಗ್ರಾಹರೆ ಎಂಬ ಗ್ರಾಮದಲ್ಲಿ ವಾಸಿಸುತ್ತಿದ್ದನು. ಅಷ್ಟು ಹಣವಂತನಾದರೂ, ಸ್ವಲ್ಪವೂ ಗರ್ವವಿರಲಿಲ್ಲ. ಬಡವರಿಗೆ ಸಹಾಯ ಮಾಡುವುದು, ಮತ್ತು ಅನುಕಂಪ ತೋರುವುದು ಅವನ ಹುಟ್ಟು ಗುಣವಾಗಿತ್ತು. ಅವನಿಗೆ ಶ್ರೀ ರಾಮಾನುಜರೆಂದರೆ ಅಪಾರ ಭಕ್ತಿ, ಶ್ರದ್ಧೆ. ಅವನ ಪತ್ನಿ ಆಂಡಾಳ್ ಸಹ ಎಲ್ಲ ವಿಧದಲ್ಲೂ ಕೂರೇಶರಿಗೆ ಸಹಾಯಕಳಾಗಿದ್ದಳು. ದಂಪತಿಗಳು ಶ್ರೀ ರಾಮಾನುಜರ ಪರಮಭಕ್ತರಾಗಿದ್ದರು. ಅಲ್ಲದೆ ಕೂರೇಶನು ದೊಡ್ಡ ಜ್ಞಾನಿ ಮತ್ತು ಅವನ ಜ್ಞಾಪಕ ಶಕ್ತಿ ಅಪಾರವಾಗಿತ್ತು. ಒಂದೇ ಒಂದು ಸಲ ಶಾಸ್ತ್ರವನ್ನು ಓದಲಿ, ಅಥವಾ ಕೇಳಲಿ, ಎಂದೂ ಅದನ್ನು ಮರೆಯುತ್ತಿರಲಿಲ್ಲ. ಆದ್ದರಿಂದ ಕೂರೇಶರ ಈ ಜ್ಞಾನದಿಂದ ಒಮ್ಮೆ ಶ್ರೀರಾಮಾನುಜರು ಯಾದವ ಪ್ರಕಾಶರೆಂಬವರನ್ನು ವಾದದಲ್ಲಿ ಸೋಲಿಸಿದ್ದರು.

ಕೂರೇಶನು ಎಷ್ಟು ದೊಡ್ಡ ದಾನಿಯೆಂದರೆ, ಮಧ್ಯರಾತ್ರಿಯವರೆಗೂ ಯಾರೇ ಬರಲಿ, ಅವರನ್ನು ಬರಿಗೈಯಲ್ಲಿ ಹಿಂತಿರುಗಿ ಕಳುಹಿಸುತ್ತಿರಲಿಲ್ಲ. ರಾತ್ರಿ ಬಾಗಿಲು ಹಾಕಿದರೆ, ಬೆಳಗ್ಗೆ ಮತ್ತೆ ಬಾಗಿಲು ದಾನ ತೆಗೆದುಕೊಳ್ಳುವವರಿಗಾಗಿ ತೆರೆಯುತ್ತಿತ್ತು.

ಕೆಲವು ದಿನದ ನಂತರ, ಶ್ರೀರಾಮಾನುಜರು ಕಾಂಚೀಪುರವನ್ನು ತ್ಯಜಿಸಿ, ಶ್ರೀರಂಗಕ್ಕೆ ಹೋಗಿ ನೆಲೆಸಿದರು. ಅವರು ಹೋದ ಮೇಲೆ ಕೂರೇಶನಿಗೆ ಹಣ, ಆಸ್ತಿ, ವೈಭೋಗ ಎಲ್ಲದರಲ್ಲೂ ವಿರಕ್ತಿಯುಂಟಾಯಿತು.

ತನ್ನ ಗುರು ಈ ರೀತಿ ಹೊರಟುಹೋದ ಬಳಿಕ ದುಃಖದಿಂದ ತನ್ನ ರಾಜ-ವೈಭೋಗವನ್ನೆಲ್ಲಾ ತ್ಯಜಿಸಿ, ಸಾಧಾರಣ ವಸ್ತ್ರ ಧರಿಸಿ, ಗುರುವಿನ ಬಳಿಗೆ ಹೋಗಿ ಅವರ ಪಾದದಲ್ಲಿ ಶರಣಾಗಿ ಪವಿತ್ರನಾಗುವನೆಂದು, ಕೂರೇಶನು ಪತ್ನಿ ಆಂಡಾಳ್ ಸಮೇತ ಶ್ರೀರಂಗಕ್ಕೆ ಪ್ರಯಾಣ ಬೆಳೆಸಿದರು. ಕೂರೇಶರು ಎಲ್ಲವನ್ನೂ ತ್ಯಜಿಸಿದ್ದರೂ, ಪತ್ನಿ ಆಂಡಾಳ್ ಮಾತ್ರ ಒಂದು ಚಿನ್ನದ ಬಟ್ಟಲನ್ನು ಜೊತೆಯಲ್ಲಿ ತೆಗೆದುಕೊಂಡು ಹೊರಟಳು. ಏಕೆಂದರೆ, ಪತಿಗೆ ದಾಹವಾದರೆ ದಾರಿಯಲ್ಲಿ ಆಗ ಅವರಿಗೆ ಅದರಲ್ಲಿ ನೀರನ್ನು ತುಂಬಿ ಕೊಡಬಹುದೆಂದು. ಹೀಗೆ ಕಾಡಿನಲ್ಲಿ ಹೋಗುತ್ತಿರುವಾಗ, ನಿಶ್ಶಬ್ದವಾದ ದಟ್ಟ ಕಾಡಿನಲ್ಲಿ ಯಾರಾದರೂ ದರೋಡೆಕೋರರು ಇದ್ದರೆ ಹೇಗಪ್ಪಾ? ಎಂಬ ಭಯ ಬಂದಿತು. ಅದನ್ನು ಪತಿಗೆ ತಿಳಿಸಿದಳು. ಆಗ ಕೂರೇಶರು, ''ಭಯವೇಕೆ? ನಮ್ಮಲ್ಲಿ ಹಣ, ಚಿನ್ನ, ಬೆಳ್ಳಿ ಮುಂತಾದವು ಇದ್ದರೆ ತಾನೆ?'' ಎಂದರು. ಆದ್ದರಿಂದ ನೀನು ನಿರ್ಭಯಳಾಗಿರು ಎಂದು ಅರುಹಿದರು. ಅದನ್ನು ಕೇಳಿದ ಆಂಡಾಳ್ ಕೂಡಲೇ ಆ ಚಿನ್ನದ ಬಟ್ಟಲನ್ನು ಕಾಡಿನಲ್ಲಿ ಎಸೆದುಬಿಟ್ಟಳು. ಅವಳಿಗೆ ಆಗ ಅನ್ನಿಸಿತು, 'ಗುರು-ದೇವರೆಂಬ ಆಸ್ತಿ ಇರುವಾಗ ಇದೆಲ್ಲ ಕ್ಷುಲ್ಲಕವಲ್ಲವೆ?' ಎಂದು.

ದಂಪತಿಗಳು ಶ್ರೀರಂಗವನ್ನು ತಲುಪಿ, ಶ್ರೀರಾಮಾನುಜರನ್ನು ಸಂದರ್ಶಿಸಿದರು. ಗುರುಗಳು ಅವರಿಗೆ ಉಳಿದುಕೊಳ್ಳಲು ವ್ಯವಸ್ಥೆ ಮಾಡಿದರು. ಅಂದಿನಿಂದ ಕೂರೇಶರು ಭಿಕ್ಷಾಟನೆಯಿಂದ ಜೀವನ ನಡೆಸುತ್ತಿದ್ದರು. ಅವರ ಪತ್ನಿ ಸಹ ಗೊಣಗಾಡದೆ, ಎಲ್ಲ ರೀತಿಯಿಂದಲೂ ಕೂರೇಶರಿಗೆ ಸಹಕರಿಸುತ್ತಿದ್ದಳು.

ಹೀಗಿರುವಾಗ ಒಮ್ಮೆ ಅತ್ಯಂತ ಧಾರಾಕಾರವಾದ ಮಳೆಯಿಂದ ಕೂರೇಶರಿಗೆ ಹೊರಗೆ ಭಿಕ್ಷಾಟಣೆಗೆ ಹೋಗಲಾಗಲಿಲ್ಲ. ಅಂದು ಅವರು ಸ್ವಲ್ಪವೂ ವಿಚಲಿತರಾಗದೆ ಉಪವಾಸವಿದ್ದರು. ಆದರೆ ಆಂಡಾಳ್‌ಗೆ ಹಸಿವು ತಾಳಲಾಗಲಿಲ್ಲ. ಬೇರೆ ದಾರಿಯಿಲ್ಲದೆ, ಮಾನಸಿಕವಾಗಿ ಶ್ರೀರಂಗನಾಥನಲ್ಲಿ ಮೊರೆ ಹೋಗಿ ಪ್ರಾರ್ಥಿಸಿದಳು. ಸ್ವಲ್ಪ ಸಮಯದ ನಂತರ, ದೇವಸ್ಥಾನದ ಪೂಜಾರಿ ವೇಷದಲ್ಲಿ ಯಾರೋ ಬಂದು ಅವಳಿಗೆ ಪ್ರಸಾದವನ್ನು ತಂದುಕೊಟ್ಟರು. ಇದನ್ನು ತಿಳಿದ ಕೂರೇಶರು, ''ನೀನು ಆಹಾರಕ್ಕಾಗಿ ರಂಗನಾಥನನ್ನು ಬೇಡಿದೆಯಾ?'' ಎಂದು ಕೇಳಿದರು. ಆಂಡಾಳ್ ಹೌದೆಂದಳು.

ಕೂರೇಶರು ಪತ್ನಿಗೆ, ''ಇನ್ನು ಮೇಲೆ ನೀನು ಹೀಗೆ ಮಾಡಬಾರದು'' ಎಂದು ಹೇಳಿ, ಪ್ರಸಾದವನ್ನು ಅವಳೊಂದಿಗೆ ಸ್ವೀಕರಿಸಿದರು.

ಈ ಪ್ರಸಾದದ ಮಹಿಮೆಯಿಂದ ಆಂಡಾಳ್‌ಗೆ ಅವಳಿ ಜವಳಿ ಪುತ್ರರು ಜನಿಸಿದರು. ಮೊದಲನೆಯವನಿಗೆ ಪರಾಶರ ಎಂದೂ, ಎರಡನೆಯವನಿಗೆ ವ್ಯಾಸನೆಂದೂ ಹೆಸರಿಟ್ಟರು.

ಒಮ್ಮೆ ಪರಾಶರ ಚಿಕ್ಕ ಬಾಲಕನಾಗಿದ್ದಾಗ, ಬೀದಿಯಲ್ಲಿ ಸ್ನೇಹಿತರ ಜೊತೆ ಆಟವಾಡುತ್ತಿದ್ದ. ಅದೇ ಸಮಯದಲ್ಲಿ ಸರ್ವಜ್ಞ ಭಟ್ಟ ಮತ್ತು ಅವನ ಶಿಷ್ಯರು ದಾರಿಯಲ್ಲಿ ಹೋಗುತ್ತಿದ್ದರು. ಶಿಷ್ಯರು ತಮಟೆ ಬಾರಿಸುತ್ತಾ ಸರ್ವಜ್ಞ ಭಟ್ಟರನ್ನು ಯಾರೂ ವಾದದಲ್ಲಿ ಸೋಲಿಸಲಾರರೆಂದು ಸಾರುತ್ತಿದ್ದರು. ಇದನ್ನು ಕೇಳಿದ ಬಾಲಕ ಪರಾಶರ ಕೂಡಲೆ ಒಂದು ಮುಷ್ಟಿಯಲ್ಲಿ ಹಿಡಿ ಮಣ್ಣನ್ನು ತೆಗೆದುಕೊಂಡು, ಸರ್ವಜ್ಞ ಭಟ್ಟರ ಮುಂದೆ ನಿಂತು, ''ನೀವು ಸರ್ವಜ್ಞ

ರಾಗಿದ್ದರೆ ಇದರಲ್ಲಿ ಎಷ್ಟು ಮಣ್ಣಿನ ಕಣಗಳಿವೆ ಎಂದು ಹೇಳ ಬಲ್ಲಿರಾ?'' ಎಂದನು. ಇದನ್ನು ಹೇಳಲಾರದೆ ಸರ್ವಜ್ಞ ಭಟ್ಟನು ಬಾಲಕನನ್ನು ನೋಡಿ ಆಶ್ಚರ್ಯಚಕಿತನಾದನು. ''ಮಗು, ಇಂದಿನಿಂದ ನೀನೇ ನನ್ನ ಗುರು, ನಾನು ಸೋತೆ'' ಎಂದನು.

ಹೀಗಿರುವಾಗ ಕಾಂಚೀಪುರದಲ್ಲಿ ಕ್ರಿಮಿಕಂಠ ಎಂಬ ಚೋಳ ರಾಜನಿದ್ದ. ಅವನು ಶಿವನ ಪರಮಭಕ್ತ. ಅವನಿಗೆ ಶ್ರೀರಾಮಾನುಜರು ವೈಷ್ಣವ ಪಂಥದ ಬಗ್ಗೆ ಪ್ರಚಾರ ಮಾಡುತ್ತಿರುವುದು ತಿಳಿಯಿತು. ಅದಕ್ಕೆ ತಡೆ ಹಾಕಿ, ಶಿವನ ಪ್ರಚಾರ ಹೆಚ್ಚುವಂತೆ ಮಾಡಬೇಕೆಂದು ನಿರ್ಧರಿಸಿ, ಶ್ರೀರಾಮಾನುಜರನ್ನು ತನ್ನ ಆಸ್ಥಾನಕ್ಕೆ ಕರೆಸಬೇಕೆಂದು ತೀರ್ಮಾನಿಸಿದನು. ರಾಜನು ತನ್ನ ಅನುಚರರನ್ನು ಕಳಿಸಿ, ಶ್ರೀರಾಮನುಜರನ್ನು ಆಸ್ಥಾನಕ್ಕೆ ಕರೆದುತರಲು ಹೇಳಿದ.

ಶ್ರೀರಾಮಾನುಜರು ರಾಜನ ಅಪ್ಪಣೆಗೆ ಒಪ್ಪಿ, ಕೂಡಲೆ ಹೊರಡಲು ಅನುವಾದರು. ಆದರೆ ಅಷ್ಟರಲ್ಲಿ ಕೂರೇಶರು, ಕ್ರಿಮಿಕಂಠನ ಕುಹಕ ಬುದ್ಧಿಯನ್ನು ಅರಿತು, ಶ್ರೀ ರಾಮಾನುಜರಿಗೆ, ''ನೀವು ಹೋಗುವುದು ಬೇಡ, ನಿಮ್ಮನ್ನು ಕೊಲ್ಲಬೇಕೆಂದು ರಾಜನು ವಿಚಾರ ಮಾಡಿದ್ದಾನೆ, ಆ ಸುದ್ದಿ ನನಗೆ ತಿಳಿಯಿತು. ಆದ್ದರಿಂದ ಯಾವುದಕ್ಕೂ ಪ್ರಯೋಜನವಿಲ್ಲದ ನಾನು, ಇದು ನನ್ನ ಗುರು ಸೇವೆಯೆಂದು, ನಿಮ್ಮ ಬದಲಿಗೆ ಹೋಗುವೆನು. ಇದನ್ನು ಒಪ್ಪಿಕೊಳ್ಳಿ ಗುರುವೇ'' ಎಂದನು. ''ನನ್ನ ಬಟ್ಟೆಯನ್ನು ನೀವು ಧರಿಸಿ, ನಿಮ್ಮ ಕಷಾಯ ವಸ್ತ್ರವನ್ನು ನನಗೆ ಕೊಡಿ, ನಿಮಗೆ ಬದಲಾಗಿ ನಾನು ಹೋಗಿ ವಾದಿಸುವೆ'' ಎಂದನು. ''ನೀವು ಇಲ್ಲಿರಬೇಡಿ, ಕೂಡಲೇ ಕಾಡಿಗೆ ಹೊರಡಿ'' ಎಂದು ಅಂಗಲಾಚಿದರು.

ಅನಂತರ ಶ್ರೀರಾಮಾನುಜರು, ಕೂರೇಶರು ಹೇಳಿದಂತೆ ಒಪ್ಪಿಕೊಂಡು, ವಸ್ತ್ರವನ್ನು ಬದಲಾಯಿಸಿ ಕಾಡಿಗೆ ಹೊರಟರು. ಕೂರೇಶರು ರಾಮಾನುಜರು ಕೊಟ್ಟ ಕಾಷಾಯ ವಸ್ತ್ರವನ್ನು ಧರಿಸಿ, ಕ್ರಿಮಿಕಂಠನ ಆಸ್ಥಾನಕ್ಕೆ ತೆರಳಿದರು. ರಾಜನು ಅವನನ್ನೇ ರಾಮಾನುಜರೆಂದು ತಿಳಿದು, ''ನೀವು ಜೀವನವನ್ನು ಉಳಿಸಿಕೊಳ್ಳಬೇಕಿದ್ದರೆ, ನನ್ನ ಆಜ್ಞೆಯಂತೆ, ವೈಷ್ಣವ ಧರ್ಮವನ್ನು ತ್ಯಜಿಸಿ, ಶೈವಧರ್ಮವನ್ನು ಸ್ವೀಕರಿಸಿ ಪ್ರಚಾರ ಮಾಡಬೇಕು'' ಎಂದು ಹೇಳಿದನು.

ಕೂರೇಶರು, ತಮ್ಮ ಜೀವ, ಆತ್ಮ, ವಿವೇಕ, ಶಕ್ತಿ, ದೇಹ ಎಲ್ಲವನ್ನೂ ಮನದಲ್ಲೇ ಗುರು ರಾಮಾನುಜರಿಗೆ ಅರ್ಪಿಸಿ ಹೀಗೆ ಹೇಳಿದರು: ''ರಾಜನೇ, ಅದು ಖಂಡಿತ ಸಾಧ್ಯವಿಲ್ಲ.'' ಆಗ ಕ್ರಿಮಿಕಂಠನು ಕೋಪೋದ್ರೇಕದಿಂದ, ತನ್ನ ಅನುಚರರನ್ನು ಕರೆಸಿ, ''ರಾಮಾನುಜರನ್ನು ನನ್ನ ಕಣ್ಣು ಮುಂದಿನಿಂದ ಎಳೆದುಕೊಂಡು ಹೋಗಿ, ಅವನ ಎರಡು ಕಣ್ಣುಗಳನ್ನು ಕಿತ್ತುಹಾಕಿ'' ಎಂದು ಆರ್ಭಟಿಸಿದನು. ಅನುಚರರು ರಾಜಾಜ್ಞೆಯಂತೆ, ಕೂರೇಶರನ್ನು ರಾಮಾನುಜರೆಂದು ತಿಳಿದು , ಅವರ ಎರಡು ಕಣ್ಣುಗಳನ್ನು ಕಿತ್ತು ಹಾಕಿದರು. ರಕ್ತ ಸುರಿಯುತ್ತಿದ್ದರೂ ಕೂರೇಶರು, ಎಲ್ಲಕ್ಕಿಂತ ಉತ್ತಮವಾದದ್ದು ಗುರುವಿಗಾಗಿ ಮಾಡುವ ತ್ಯಾಗವೆಂದುಕೊಂಡು, ತಮಗಾದ ನೋವನ್ನು ಗುರುಪಾದದಲ್ಲಿ ಅರ್ಪಿಸಿಕೊಂಡರು. ಕಣ್ಣುಗಳನ್ನು ಕೀಳಿಸಿದವನನ್ನು ನಿಂದಿಸದೆ, 'ದೇವರು ನಿಮ್ಮೆಲ್ಲರಿಗೂ ಒಳ್ಳೆಯ ಬುದ್ಧಿಯನ್ನು ಕೊಟ್ಟು ಕ್ಷಮಿಸಲಿ' ಎಂದು ಹರಸಿ, ''ದಯವಿಟ್ಟು ನನ್ನನ್ನು ಶ್ರೀರಂಗಕ್ಕೆ ಕಳುಹಿಸಿಕೊಡಿ'' ಎಂದು ಹೇಳಿದರು.

ಹಿಂದೆ, ಕ್ರಿಮಿಕಂಠನ ಸಹೋದರಿಗೆ ಭೂತ ಹಿಡಿದಿತ್ತೆಂದು, ಅವಳು ಆ ಶಕ್ತಿಗೆ ಬಲಿಯಾಗಿದ್ದಳು. ಯಾವುದರಿಂದಲೂ ಆ ರೋಗ ವಾಸಿಯಾಗದೆ, ರಾಮಾನುಜರನ್ನು ಕರೆಸಿದ್ದರು. ಅವರು ತಮ್ಮ ತಪೋಬಲದಿಂದ ಆ ಭೂತವನ್ನು ಓಡಿಸಿ, ಅವಳಿಗೆ ಜೀವದಾನ ಮಾಡಿದ್ದರು. ಅದನ್ನು ಸ್ಮರಿಸಿದ ಕ್ರಿಮಿಕಂಠನು, ''ನನ್ನ ತಂಗಿಯ ಜೀವ ಉಳಿಸಿದ ಕಾರಣ, ನಿನ್ನ ಜೀವವನ್ನು ತೆಗೆಯುವುದಿಲ್ಲ. ಆದ್ದರಿಂದ, ಎಲ್ಲಾದರೂ ಬದುಕಿಕೊಂಡಿರು, ಹೋಗು'' ಎಂದನು. ಅವನಿಗೆ ಹಣ ಕೊಟ್ಟು, ಅವನನ್ನು ಶ್ರೀರಂಗದಲ್ಲಿ ಬಿಟ್ಟು ಬನ್ನಿ ಎಂದು ತನ್ನ ಅನುಚರರಿಗೆ ಆಜ್ಞಾಪಿಸಿದನು.

ಕ್ರಿಮಿಕಂಠನು, ತಾನು ಮಾಡಿದ ಪಾಪಕೃತ್ಯಕ್ಕೆ ಆ ಜನುಮದಲ್ಲೇ ವಾಸಿಯಾಗದ ಖಾಯಿಲೆಯಿಂದ ನರಳಿ ಅಸುನೀಗಿದನು. ಇದನ್ನು ತಿಳಿದ ರಾಮಾನುಜರು ಬಹಳ ನೊಂದರು.

ಅವರ ಶಿಷ್ಯ ಕೂರೇಶರ ಅಪಾರ ಭಕ್ತಿ-ತ್ಯಾಗ ಹೀಗಿತ್ತು.

ನಂತರ ಕೂರೇಶರು ಗುರು ರಾಮಾನುಜರನ್ನು ಭೇಟಿಮಾಡಿದಾಗ, ಅವರು ಕೂರೇಶರ ಕೈಹಿಡಿದೆತ್ತಿ ಆಲಂಗಿಸಿ ಆಶೀರ್ವದಿಸಿದರು. ''ನೀನು, ಕಾಂಚೀಪುರಕ್ಕೆ ಹೋಗಿ, ನಿನ್ನ ಕಣ್ಣುಗಳನ್ನು ಮರಳಿ ಕೊಡುವಂತೆ ವರದರಾಜ ಸ್ವಾಮಿಯನ್ನು ಕೇಳಿಕೋ. ಈಗ ಕ್ರಿಮಿಕಂಠನು ನಿಧನ ಹೊಂದಿರುವುದರಿಂದ ಅವನ ಭಯವಿಲ್ಲ'' ಎಂದರು. ಅನಂತರ ಕೂರೇಶರು ಕಾಂಚೀಪುರಕ್ಕೆ ಹೋಗಿ ವರದರಾಜ ಸ್ವಾಮಿಗೆ ಶರಣಾಗಿ ಬೇಡಿದರು. ಆಗ ವರದರಾಜರು, ''ನಿನಗೇನು ಬೇಕು ಕೇಳಿಕೋ, ಅನುಗ್ರಹಿಸುತ್ತೇನೆ'' ಎಂದರು. ಕೂರೇಶರು ಕಳೆದುಹೋದ ದೃಷ್ಟಿಗಾಗಿ ಬೇಡದೆ, ''ಚತುರ್‌ಗ್ರಾಮದಲ್ಲಿರುವವರಿಗೆಲ್ಲಾ ಮೋಕ್ಷವನ್ನು ದಯಪಾಲಿಸು'' ಎಂದನು. ಕಾರಣ, ಚತುರ್‌ಗ್ರಾಮದಲ್ಲಿ ಕೂರೇಶನ ಕಣ್ಣುಗಳನ್ನು ಕಿತ್ತವನೂ ಇದ್ದನು. ಕೂರೇಶರು ತಮ್ಮ ಶತ್ರುಗಳಿಗೂ ಒಳ್ಳೆಯದನ್ನೇ ಬಯಸಿದರು. ಮರಳಿ ರಾಮಾನುಜರ ಬಳಿಗೆ ಬಂದ ಕೂರೇಶರು ತಾನು ಬೇಡಿದ ವರವನ್ನು ಕುರಿತಾಗಿ ಅವರಿಗೆ ತಿಳಿಸಿದರು.

ರಾಮಾನುಜರು ತಮ್ಮ ಶಿಷ್ಯನ ಹಿರಿದಾದ ಗುಣವನ್ನು ಮೆಚ್ಚಿದರು. ಕೂರೇಶನಿಗೆ, ಮತ್ತೆ ಹೋಗಿ ವರದರಾಜಸ್ವಾಮಿಯಲ್ಲಿ ತನ್ನ ಕಣ್ಣುಗಳಿಗಾಗಿ ಬೇಡಿಕೊಳ್ಳುವಂತೆ ಹೇಳಿದರು. ''ಏಕೆಂದರೆ, ನೀನು, ನಿನ್ನ ದೇಹ ಮನಸ್ಸು ಎಲ್ಲವೂ ನನ್ನದೇ ಆಗಿದೆ. ಆದ್ದರಿಂದ, ನಿನಗೆ ಕಣ್ಣು ಮರಳಿ ಬಂದರೆ, ಅದು ನನಗೂ ಬಂದಂತೆ'' ಎಂದರು. ಕೂರೇಶರು ಮತ್ತೆ ವರದರಾಜರ ಬಳಿ ಹೋಗಿ, ತನ್ನ ಗುರುಗಳ ಇಷ್ಟವನ್ನು ಪೂರೈಸುವಂತೆ ಬೇಡಿದರು. ವರದರಾಜರ ಅನುಗ್ರಹದಿಂದ ಕೂರೇಶರಿಗೆ ಕಳೆದುಹೋದ ಕಣ್ಣುಗಳು ಮರಳಿ ಬಂದವು.

ಕೂರೇಶರು ಶತ್ರುಗಳಿಗೇ ಮೋಕ್ಷ ಬೇಡಿದಾಗ, ಸ್ವತಃ ಅವರಿಗೆ ಮೋಕ್ಷ ದೊರೆಯದೆ ಇರುತ್ತದೆಯೆ?

# ಜಾನಕಿ ಷಾ

## 'ದೇವರೊಡನೆ ಬಾಳಿದವರು'

ಸಂಗ್ರಹ: **ಸ್ವರ್ಣಗೌರಿ**

ಆಲ್ಮೋರಾದ ಗೌರವಾನ್ವಿತ ಪ್ರಜೆ 'ಲಾಲಾ ಬದ್ರಿ ಷಾ'. ಶ್ರೀಮತಿ ಜಾನಕಿ ಷಾ, ಲಾಲಾ ಬದ್ರಿ ಷಾ ರವರ ಬಂಧುಗಳಾದ ಶ್ರೀಮಾನ್ ಜವಹರಲಾಲ್ ಷಾರವರ ಪತ್ನಿ. ರಾಮಕೃಷ್ಣ ಮಠದ ಎಲ್ಲಾ ಸಾಧು ಸಂನ್ಯಾಸಿಗಳನ್ನು ಆದರಿಸಿ, ಸತ್ಕರಿಸಿ, ಸೇವೆ ಮಾಡಿದ ಲಾಲಾ ಬದ್ರಿ ಷಾರವರು ನಿಷ್ಠಾವಂತ ಭಕ್ತರಾಗಿದ್ದರು. ಸ್ವಾಮಿ ವಿವೇಕಾನಂದರಿಗೆ ಅವರೊಡನೆ ಅನ್ಯೋನ್ಯವಾದ ಸಂಬಂಧವಿತ್ತು. ಒಂದು ದಿನ ಅಪರಾಹ್ನದ ಹೊತ್ತಿನಲ್ಲಿ ಜಾನಕಿಯ ಮನೆಗೆ ಭಿಕ್ಷೆಯನ್ನು ಯಾಚಿಸುತ್ತಾ ಸಾಧುವೊಬ್ಬರು ಬಂದರು. ಅವರನ್ನು ಸ್ವಾಗತಿಸಿ, ಸುಖಾಸನವಿತ್ತು, ಬಿಸಿ ಬಿಸಿ ಹಾಲನ್ನಿತ್ತು ಸತ್ಕರಿಸಿದಳು ಜಾನಕಿ ಷಾ. ತಲೆಗೆ ರುಮಾಲನ್ನು ಕಟ್ಟಿಕೊಂಡಿದ್ದ ಆ ಸಾಧುವು ಶ್ರದ್ಧಾಭಕ್ತಿಗಳಿಂದ ನೀಡಿದ ಆ ಹಾಲನ್ನು ಸ್ವೀಕರಿಸಿ, ಆಕೆಗೆ ಗಹನವಾದ ಆಧ್ಯಾತ್ಮಿಕ ಉಪದೇಶಗಳನ್ನಿತ್ತು ವಿದಾಯ ಹೇಳಿದರು. ಸಾಧುವಿನ ನಿರ್ಗಮನದ ನಂತರ ಅವರಲ್ಲಿ ಸ್ವಾಮಿ ವಿವೇಕಾನಂದರ ಹೋಲಿಕೆಯನ್ನು ಕಂಡು, ಸಂಶಯದಿಂದ ಅವರನ್ನು ಅರಸುತ್ತಾ ಮನೆಯಿಂದ ಹೊರಬಂದು, ಓಡುತ್ತ ಬಸ್ ನಿಲ್ದಾಣದ ವರೆಗೂ ಹುಡುಕಾಡಿದರು. ಆದರೆ ಅಷ್ಟರಲ್ಲಿ ಅ ಸಾಧು ಕಣ್ಮರೆಯಾಗಿಬಿಟ್ಟಿದ್ದರು.

ಈ ಘಟನೆ ನಡೆದು ಅನೇಕ ದಿನಗಳ ನಂತರ ಸಾಧುವೊಬ್ಬರು ಆಕೆಗೆ ಕಾಗದದ ಲಕೋಟೆಯೊಂದನ್ನು ಕೊಟ್ಟು ಅದನ್ನು ತಕ್ಷಣವೇ ನೋಡಬಾರದೆಂದು ಆಜ್ಞಾಪಿಸಿ ನಿರ್ಗಮಿಸಿದರು. ಜಾನಕಿಯು ಅದನ್ನು ಜೋಪಾನವಾಗಿ ಪೆಟ್ಟಿಗೆಯಲ್ಲಿಟ್ಟು ನಂತರ ಆ ವಿಷಯವನ್ನು ೨೦ ವರ್ಷಗಳ ಕಾಲ ಮರತೇಬಿಟ್ಟಳು! ಮುಂದೊಮ್ಮೆ ಮನೆಯನ್ನು ಬದಲಾಯಿಸುತ್ತಿರುವ ಸಂದರ್ಭದಲ್ಲಿ ಲಕೋಟೆಯು ದೊರಕಿ, ಅದರಲ್ಲಿ ಶ್ರೀಕೃಷ್ಣನ ಭಾವದಲ್ಲಿದ್ದ ಸ್ವಾಮಿ ವಿವೇಕಾನಂದರ ಭಾವಚಿತ್ರವನ್ನು ನೋಡಿ ಅವಳಿಗೆ ಆಶ್ಚರ್ಯವಾಯಿತು. ಆಲ್ಮೋರಾದ ಸ್ವಾಮಿ ವಿವೇಕಾನಂದರ ಭಾವಚಿತ್ರ ಇದೊಂದೆ. ಆ ಭಾವಚಿತ್ರವು ತನ್ನೊಡನೆ ಮಾತನಾಡುತ್ತಿತ್ತೆಂದೂ ಹಾಗೂ ತಾನು ಎಲ್ಲಿಗೆ ಹೋದರೂ ಆ ಎರಡು ನಯನಗಳು ತನ್ನನ್ನು ಗಮನಿಸುತ್ತಿದ್ದವು ಎಂದೂ ಜಾನಕಿ ಹೇಳುತ್ತಿದ್ದಳು.

ಒಮ್ಮೆ ಅವಳಿಗೆ ಮಗನೊಡನೆ ಪರಸ್ಥಳಕ್ಕೆ ಹೋಗಬೇಕಾಗಿ ಬಂತು. ರಾತ್ರಿ ವೇಳೆ ಮಗನೊಡನೆ ಮಲಗಿದ್ದಾಗ ಸ್ವಾಮೀಜಿ ತನ್ನ ಬಳಿಯಲ್ಲಿ ನಿಂತು ಕಣ್ಣೀರು ಸುರಿಸುತ್ತಿದ್ದಂತೆ ಅವಳಿಗೆ ಭಾಸವಾಯಿತು. ಈ ದರ್ಶನವನ್ನು ಉದಾಸೀನ ಮಾಡದೆ, ಮಗನೊಡನೆ ತಕ್ಷಣವೇ ತನ್ನ ಊರಿಗೆ ಹೊರಟು, ಅವೇಳೆಯಲ್ಲಿ ಮನೆ ತಲುಪಿದಳು. ಅಲ್ಲಿ ಕಂಡದ್ದೇನು?

ಹೃದಯಾಘಾತದಿಂದ ನರಳುತ್ತಿದ್ದ ಪತಿಯು ತನ್ನ ಕೊನೆಯ ಕ್ಷಣಗಳನ್ನು ಎಣಿಸುತ್ತಿದ್ದನು. ಪತ್ನಿಯೊಡನೆ ಪಿಸುಗುಡುವ ಧ್ವನಿಯಲ್ಲಿ ಒಂದೆರಡು ಮಾತುಗಳನ್ನಾಡಿ, ಅವನು ಕಣ್ಮುಚ್ಚಿದನು.

## ಯುವಚೇತನ



### ಮಹಾವೀರನ ಆದರ್ಶ

ಮಹಾವೀರನನ್ನು ನಮ್ಮ ಗುರಿಯಾಗಿಟ್ಟುಕೊಳ್ಳಬೇಕು. ರಾಮಚಂದ್ರನ ಆಣತಿಯಂತೆ ಅವನು ಹೇಗೆ ಸಮುದ್ರವನ್ನೇ ದಾಟಿದ! ಅವನಿಗೆ ಜೀವನ ಮರಣ ಯಾವುದರ ಮೇಲೂ ಗಮನವಿರಲಿಲ್ಲ. ಅವನು ಇಂದ್ರಿಯಗಳನ್ನು ಸಂಪೂರ್ಣವಾಗಿ ತನ್ನ ವಶದಲ್ಲಿಟ್ಟುಕೊಂಡಿದ್ದ, ತೀಕ್ಷ್ಣಮತಿಯಾಗಿದ್ದ. ನೀವೀಗ ಈ ಸೇವೆಯ ಮಹೋದ್ದೇಶದ ಮೇಲೆ ನಿಮ್ಮ ಜೀವನವನ್ನು ಕಟ್ಟಬೇಕು. ಅದರ ಮೂಲಕ ಇತರ ಎಲ್ಲಾ ಉದ್ದೇಶಗಳೂ ಕ್ರಮೇಣ ವಿಕಸಿಸುವುವು. ಮರುಮಾತಿಲ್ಲದೆ ಗುರುವಿನ ಮಾತಿಗೆ ವಿಧೇಯರಾಗಿ ನಡೆಯುವುದು, ಮತ್ತು ಬ್ರಹ್ಮಚಾರಿ ಜೀವನ ನಡೆಸುವುದು, ಇದೇ ಜಯದ ರಹಸ್ಯ. ಹನುಮಂತ ಒಂದು ಕಡೆ ಸೇವೆಯ ಮಹೋದ್ದೇಶವನ್ನು, ಇನ್ನೊಂದು ಕಡೆ ಇಡೀ ಜಗತ್ತೇ ಬೆರಗಾಗುವಂತಹ ಸಿಂಹಸದೃಶ ಧೈರ್ಯವನ್ನು ಪ್ರಕಟಿಸುತ್ತಾನೆ. ರಾಮನ ಕಲ್ಯಾಣಕ್ಕಾಗಿ ಪ್ರಾಣವನ್ನೇ ಅರ್ಪಿಸಲು ಅವನು ಸ್ವಲ್ಪವೂ ಅನುಮಾನಿಸಲಿಲ್ಲ. ರಾಮನ ಸೇವೆಯ ಹೊರತು ಉಳಿದುದರಲ್ಲೆಲ್ಲ ಅವನಿಗೆ ತಾತ್ಸಾರ. ಶ್ರೀರಾಮನ ಆಣತಿಯಂತೆ ನಡೆಯುವುದೊಂದೇ ಅವನ ಜೀವನದ ವ್ರತ. ಅಂತಹ ಹೃತ್ಪೂರ್ವಕ ಭಕ್ತಿ ಬೇಕಾಗಿದೆ.

*(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೮, ಪು.೨೨೮-೨೯)*

# ಶ್ರೀರಾಮಕೃಷ್ಣ ಸಂಘಸ್ತೋತ್ರಮ್

ಸ್ವಾಮಿ ನಿತ್ಯಸ್ಥಾನಂದ

ಶ್ರೀರಾಮಕೃಷ್ಣರನ್ನು ಹಾಗೂ ಅವರ ಲೀಲಾಸಹಾಯಕರಾಗಿ ಬಂದ ಒಡನಾಡಿಗಳನ್ನು ಕುರಿತು ಸ್ತುತಿಸುವ ಹಲವು ಶ್ಲೋಕಗಳನ್ನೊಳಗೊಂಡ ಸ್ತೋತ್ರರಚನೆ ಇಲ್ಲಿದೆ. ಇದರ ಕರ್ತೃಗಳು ಈ ಪತ್ರಿಕೆಯ ಮೊದಲ ಸಂಪಾದಕರೂ, ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಅಧ್ಯಕ್ಷರೂ ಆಗಿದ್ದರು. ಹಲವು ಕೃತಿಗಳನ್ನು ರಚಿಸಿರುವ ಪೂಜ್ಯರು ಸಂಸ್ಕೃತ ಹಾಗೂ ಶಾಸ್ತ್ರಗ್ರಂಥಗಳಲ್ಲಿ ಪರಿಣತರಾಗಿದ್ದಾರೆ.

**ಮಧುಪಂ ಮಧುರಾಕಾರಂ ಭಕ್ತಹೃತ್ಪದ್ಮವಾಸಿನಮ್ ।**
**ಭಕ್ತಿ-ಮಧು ಪಿಬಂತಂ ತಂ ರಾಮಕೃಷ್ಣಂ ನಮಾಮ್ಯಹಮ್ ॥ ೧ ॥**

ಭಕ್ತರ ಹೃದಯವೆಂಬ ಕಮಲದಲ್ಲಿ ವಾಸಿಸುತ್ತಿರುವ, ಭಕ್ತಿಯೆಂಬ ಮಕರಂದವನ್ನು ಕುಡಿಯುತ್ತಿರುವ ಮಧುರವಾದ ಆಕಾರದಿಂದ ಕೂಡಿರುವ ದುಂಬಿಯಾದ ಶ್ರೀರಾಮಕೃಷ್ಣರನ್ನು ನಮಿಸುತ್ತೇನೆ.

**ಶಾರದಾಂ ಸಾರದಾಂ ವಂದೇ ಘೋರಸಂಸಾರತಾರಿಣೀಮ್ ।**
**ಮಾತರಂ ಸರ್ವಲೋಕಾನಾಂ ಸತಾಂ ಚಾಪ್ಯಸತಾಂ ಶುಭಾಮ್ ॥ ೨ ॥**

ಘೋರವಾದ ಸಂಸಾರಸಾಗರದಿಂದ ನಮ್ಮನ್ನು ದಾಟಿಸುವ, ಸರ್ವಲೋಕಗಳಿಗೂ, ಸತ್ಪುರುಷರು - ಅಸತ್ಪುರುಷರಿಬ್ಬರಿಗೂ ತಾಯಿಯಾಗಿರುವ, ಮಂಗಳವನ್ನು ಉಂಟುಮಾಡುವ, ಭಕ್ತಿಯ ಸಾರವನ್ನು ನೀಡುವ ಶ್ರೀಶಾರದಾಮಾತೆಯವರನ್ನು ವಂದಿಸುತ್ತೇನೆ.

**ಯೋ ವಾಕ್ಶಕ್ತ್ಯಾ ಜಗತ್ಕೃತ್ಸ್ನಂ ಜಿತವಾನ್ ಧೃತವಾನ್ ತಥಾ ।**
**ವೀರಸಂನ್ಯಾಸಿನಂ ವಂದೇ ವಿವೇಕಾನಂದಸ್ವಾಮಿನಮ್ ॥ ೩ ॥**

ತಮ್ಮ ಮಾತಿನ ಶಕ್ತಿಯ ಮೂಲಕ ಇಡೀ ವಿಶ್ವವನ್ನೇ ಗೆದ್ದ ಹಾಗೂ ಅದನ್ನು ಮೇಲಕ್ಕೆತ್ತಿದ ವೀರ ಸಂನ್ಯಾಸಿ ಸ್ವಾಮಿ ವಿವೇಕಾನಂದರನ್ನು ವಂದಿಸುತ್ತೇನೆ.

**ಬ್ರಹ್ಮಾನಂದಮಹಂ ವಂದೇ ಶ್ರೀಕೃಷ್ಣಚರಣಾಶ್ರಿತಮ್ ।**
**ಗುರೋಃ ಶ್ರೀರಾಮಕೃಷ್ಣಸ್ಯ ಪುತ್ರಂ ಮಾನಸರೂಪಿಣಮ್ ॥ ೪ ॥**

ತಮ್ಮ ಗುರು ಶ್ರೀರಾಮಕೃಷ್ಣರ ಮಾನಸಪುತ್ರನಂತಿದ್ದ, ಶ್ರೀಕೃಷ್ಣನ ಪಾದಗಳನ್ನು ಆಶ್ರಯಿಸಿದ ಸ್ವಾಮಿ ಬ್ರಹ್ಮಾನಂದರನ್ನು ವಂದಿಸುತ್ತೇನೆ.

**ಪ್ರೇಮಾನಂದಮಹಂ ವಂದೇ ರಾಧಾಪ್ರೇಮಾಂಶಸಂಭವಮ್ ।**
**ಶ್ರೀರಾಮಕೃಷ್ಣಪ್ರೇಮಸ್ಯ ಮೂರ್ತಿಮಾನಿವ ಶೋಭಿತಮ್ ॥ ೫ ॥**

ಶ್ರೀರಾಧೆಯ ಅಂಶದಿಂದ ಹುಟ್ಟಿದ, ಶ್ರೀರಾಮಕೃಷ್ಣರ ಪ್ರೇಮವೇ ಮೂರ್ತಿವೆತ್ತಂತೆ ಶೋಭಿಸಿದ ಸ್ವಾಮಿ ಪ್ರೇಮಾನಂದರನ್ನು ವಂದಿಸುತ್ತೇನೆ.

**ವಂದೇಽಹಮದ್ಭುತಾನಂದಮಕ್ಷರಸ್ಥಂ ನಿರಕ್ಷರಮ್ ।**
**ಸೇವಯಾ ರಾಮಕೃಷ್ಣಸ್ಯ ಸಂಸಿದ್ಧಿಂ ಪ್ರಾಪ್ತವಾನಸೌ ॥ ೬ ॥**

ಅಕ್ಷರಾಭ್ಯಾಸವನ್ನು ಮಾಡದಿದ್ದರೂ, ಅಕ್ಷರ(ಬ್ರಹ್ಮ)ದಲ್ಲಿ ನೆಲೆನಿಂತ, ಸ್ವಾಮಿ ಅದ್ಭುತಾನಂದರನ್ನು ನಾನು ವಂದಿಸುತ್ತೇನೆ. ಅವರು ಶ್ರೀರಾಮಕೃಷ್ಣರಿಗೆ ಸೇವೆಯನ್ನು ಮಾಡುವ ಮೂಲಕವೇ ಆಧ್ಯಾತ್ಮಿಕ ಸಿದ್ಧಿಯನ್ನು ಹೊಂದಿದವರಲ್ಲವೆ?

**ಪ್ರಸನ್ನವದನಂ ಶಾಂತಂ ಶಿವಾನಂದಮಹಾಮುನಿಮ್।**
**ಮಹಾಪುರುಷೇತಿ ನಾಮ್ನಾ ಖ್ಯಾತಂ ತಂ ಪ್ರಣಮಾಮ್ಯಹಮ್ ॥ ೭ ॥**

ಪ್ರಸನ್ನವದನರೂ, ಶಾಂತಸ್ವಭಾವದವರೂ, 'ಮಹಾಪುರುಷ ಮಹಾರಾಜ'ರೆಂದೇ ಪ್ರಸಿದ್ಧರಾದವರೂ ಆದ ಮಹಾಮುನಿ ಸ್ವಾಮಿ ಶಿವಾನಂದರಿಗೆ ನಮಿಸುತ್ತೇನೆ.

**ಯೋಗಾನಂದಂ ಮಹಾಪೂಜ್ಯಂ ಮೃದುಶೀಲಂ ದೃಢವ್ರತಮ್।**
**ಶಾರದಾರ್ಪಿತಚಿತ್ತಂ ತಂ ಪ್ರಣಮಾಮಿ ಮುಹುರ್ಮುಹುಃ ॥ ೮ ॥**

ಮೃದುಸ್ವಭಾವದ ಹಾಗೂ ಪೂಜ್ಯರಾದ, ದೃಢವಾದ ಮನಸ್ಸಿನಿಂದ ತಪಸ್ಸನ್ನಾಚರಿಸಿದ, ಶ್ರೀಶಾರದಾ ಮಾತೆಯವರಿಗೆ ತಮ್ಮ ಚಿತ್ತವನ್ನು ಸಂಪೂರ್ಣವಾಗಿ ಅರ್ಪಿಸಿದ ಸ್ವಾಮಿ ಯೋಗಾನಂದರನ್ನು ಮತ್ತೆ ಮತ್ತೆ ನಮಿಸುತ್ತೇನೆ.

**ನಿರಂಜನಮರ್ಕತೇಜಂ ತಂ ವಂದೇ ಸಾಹಸಪ್ರಿಯಮ್ ।**
**ಜ್ಞಾನಾಂಜನಸಮಾಯುಕ್ತಮಜ್ಞಾನದಹನಕ್ಷಮಮ್ ॥ ೯ ॥**

ಸಾಹಸಪ್ರಿಯರೂ, ಸೂರ್ಯನಂತೆ ತೇಜಸ್ಸುಳ್ಳವರೂ, ಮಲಿನತೆಯು ಸ್ವಲ್ಪವೂ ಇಲ್ಲದವರೂ, ಅಜ್ಞಾನವನ್ನು ನಾಶಮಾಡಬಲ್ಲ ಜ್ಞಾನವೆಂಬ ಅಂಜನವನ್ನು ಲೇಪಿಸಿಕೊಂಡವರೂ ಆದ ಸ್ವಾಮಿ ನಿರಂಜನಾನಂದರನ್ನು ವಂದಿಸುತ್ತೇನೆ.

**ವಂದೇ ತಂ ಶಾರದಾನಂದಂ ನಿಶ್ಚಲಂ ಶಾರದಾಪ್ರಿಯಮ್ ।**
**ಗುರೋರ್ಲೀಲಾಪ್ರಸಂಗೇನ ಪ್ರಾಪ್ತವಾನ್ ಕೃತಕೃತ್ಯತಾಮ್ ॥ ೧೦ ॥**

ತತ್ತ್ವದಲ್ಲಿ ಸ್ಥಿರವಾಗಿ ನಿಂತವರೂ, ಶಾರದಾಮಾತೆಯವರಿಗೆ ಅತ್ಯಂತ ಪ್ರೀತಿಪಾತ್ರರೂ, ತಮ್ಮ ಗುರುವಾದ ಶ್ರೀರಾಮಕೃಷ್ಣರನ್ನು ಕುರಿತು 'ಶ್ರೀರಾಮಕೃಷ್ಣ ಲೀಲಾಪ್ರಸಂಗ'ವೆಂಬ ಗ್ರಂಥವನ್ನು ಬರೆದು ಕೃತಕೃತ್ಯರೂ ಆದ ಸ್ವಾಮಿ ಶಾರದಾನಂದರನ್ನು ವಂದಿಸುತ್ತೇನೆ.

**ತುರೀಯಸಂಸ್ಥಿತಮ್ ವಂದೇ ತುರೀಯಾನಂದಸ್ವಾಮಿನಮ್ ।**
**ವೇದಾಂತತತ್ತ್ವನಿಷ್ಣಾತಂ ತಪಶ್ಚರಣತತ್ಪರಮ್ ॥ ೧೧ ॥**

ವೇದಾಂತ ತತ್ತ್ವದಲ್ಲಿ ನಿಷ್ಣಾತರೂ, ತಪಸ್ಸನ್ನಾಚರಿಸುವುದರಲ್ಲಿ ತತ್ಪರರೂ, ತುರೀಯಾವಸ್ಥೆಯಲ್ಲಿ ನೆಲೆನಿಂತವರೂ ಆದ ಸ್ವಾಮಿ ತುರೀಯಾನಂದರನ್ನು ನಮಿಸುತ್ತೇನೆ.

**ರಾಮಕೃಷ್ಣಗತಪ್ರಾಣಂ ರಾಮಕೃಷ್ಣಪದಾಶ್ರಿತಮ್ ।**
**ತತ್ಪೂಜಾನಿರತಂ ರಾಮಕೃಷ್ಣಾನಂದಂ ನಮಾಮ್ಯಹಮ್ ॥ ೧೨ ॥**

ಶ್ರೀರಾಮಕೃಷ್ಣರಿಗೆ ತಮ್ಮ ಪ್ರಾಣಗಳನ್ನೆಲ್ಲ ಸಮರ್ಪಿಸಿದ, ಅವರ ಪಾದಗಳನ್ನೇ ಸದಾ ಆಶ್ರಯಿಸಿದ, ಅವರ ಪೂಜೆಯಲ್ಲೇ ಯಾವಾಗಲೂ ನಿರತರಾಗಿದ್ದ ಸ್ವಾಮಿ ರಾಮಕೃಷ್ಣಾನಂದರನ್ನು ನಮಿಸುತ್ತೇನೆ.

**ಅಖಂಡಸೇವಾನಿರತಮಖಂಡಾನಂದಸ್ವಾಮಿನಮ್ ।**
**ಶಿವಬುದ್ಧ್ಯಾ ಚ ಜೀವಾನಾಂ ನರೇಂದ್ರಸ್ಯ ಪದಾನುಗಮ್ ॥ ೧೩ ॥**

ಸ್ವಾಮಿ ವಿವೇಕಾನಂದರು ಹಾಕಿಕೊಟ್ಟ ಮಾರ್ಗದಲ್ಲೇ ನಡೆಯುತ್ತ, 'ಶಿವಜ್ಞಾನೇ ಜೀವಸೇವಾ' (ಜೀವನೇ ಶಿವನೆಂಬ ಭಾವದಿಂದ ಜೀವಿಗಳ ಸೇವೆ ಮಾಡುವುದು) ಎಂಬ ತತ್ತ್ವದಂತೆ ನಿರಂತರ ಸೇವೆ ಮಾಡುವುದರಲ್ಲೇ ನಿರತರಾಗಿದ್ದ ಸ್ವಾಮಿ ಅಖಂಡಾನಂದರನ್ನು (ನಮಿಸುತ್ತೇನೆ.)

**ಸುಬೋಧಂ ಬೋಧಸಂಯುಕ್ತಂ ಮೃದುಭಾಷಿಂ ಶಿಶೂಪಮಮ್ ।**
**ಸ್ವಭಾವಸರಲಂ ಶಾಂತಂ ನಮಾಮಿ ಕರುಣಾಮಯಮ್ ॥ ೧೪ ॥**

ಮೃದುಭಾಷಿಯೂ, ಮಗುವಿನಂಥವರೂ, ಬೋಧೆ(ಜ್ಞಾನ)ಯಿಂದ ಕೂಡಿದವರೂ, ಸರಳ ಸ್ವಭಾವದವರೂ, ಶಾಂತರೂ, ಕರುಣಾಮಯರೂ ಆದ ಸ್ವಾಮಿ ಸುಬೋಧಾನಂದರನ್ನು ನಮಿಸುತ್ತೇನೆ.

**ಜ್ಞಾನವೃದ್ಧಂ ವಯೋವೃದ್ಧಮದ್ವೈತಾನಂದಸ್ವಾಮಿನಮ್ ।**
**ರಾಮಕೃಷ್ಣಸ್ಯ ಸೇವಾರ್ಥಂ ತ್ಯಕ್ತಸರ್ವಂ ನಮಾಮ್ಯಹಂ ॥ ೧೫ ॥**

ಜ್ಞಾನವೃದ್ಧರೂ, ವಯೋವೃದ್ಧರೂ ಆದ, ಶ್ರೀರಾಮಕೃಷ್ಣರ ಸೇವೆಗೋಸ್ಕರ ತಮ್ಮ ಸರ್ವಸ್ವವನ್ನೂ ತ್ಯಾಗ ಮಾಡಿದ ಸ್ವಾಮಿ ಅದ್ವೈತಾನಂದರನ್ನು ನಮಿಸುತ್ತೇನೆ.

**ಅವಧೂತವನ್ನಿರ್ಧೂತಲೋಕಮರ್ಯಾದಮಕ್ಷತಮ್ ।**
**ವಂದೇ ಚ ವಾಸ್ತುಶಿಲ್ಪಜ್ಞಂ ಬ್ರಹ್ಮವಿಜ್ಞಾನ ಸ್ವಾಮಿನಮ್ ॥ ೧೬ ॥**

ಅವಧೂತನಂತೆ ಲೋಕರೂಢಿ, ರೀತಿಗಳನ್ನೆಲ್ಲ ಪೂರ್ಣವಾಗಿ ಅಳಿಸಿಹಾಕಿದ, ವಾಸ್ತು-ಶಿಲ್ಪ ವಿಶಾರದರಾದ ಬ್ರಹ್ಮಜ್ಞಾನಿ ಸ್ವಾಮಿ ವಿಜ್ಞಾನಾನಂದರನ್ನು ವಂದಿಸುತ್ತೇನೆ.

**ತತ್ತ್ವಜ್ಞಂ ಯೋಗಿವರ್ಯಂ ತಮಭೇದಾನಂದಯೋಗಿನಮ್ ।**
**ಜ್ಞಾನಪ್ರಸಾರವಿಖ್ಯಾತಂ ನಮಾಮಿ ಪಂಡಿತೋತ್ತಮಮ್ ॥ ೧೭ ॥**

ತತ್ತ್ವಜ್ಞರೂ ಯೋಗಿವರರೂ ಆದ, ಜ್ಞಾನಪ್ರಸಾರವನ್ನು ಮಾಡಿ ಪ್ರಖ್ಯಾತಿ ಪಡೆದ, ಪಂಡಿತೋತ್ತಮರಾದ ಸ್ವಾಮಿ ಅಭೇದಾನಂದರನ್ನು ನಮಿಸುತ್ತೇನೆ.

**ನಮಾಮಿ ತ್ರಿಗುಣಾತೀತಂ ಗುಣೇಢ್ಯಂ ಗುಣಸಂಪದಮ್ ।**
**ಉದ್ಬೋಧನೇನ ವಿಖ್ಯಾತಮುದ್ಬೋಧನಸಮನ್ವಿತಮ್॥ ೧೮ ॥**

ಗುಣಗಳಿಂದ ಕೂಡಿದ, ಗುಣಗಳೆಂಬ ಸಂಪತ್ತನ್ನು ಹೊಂದಿದ, 'ಉದ್ಬೋಧನ' ಪತ್ರಿಕೆಯನ್ನು ನಡೆಸುವ ಮೂಲಕ ಖ್ಯಾತರಾದ, ಶ್ರೇಷ್ಠ ಆಧ್ಯಾತ್ಮ ವಿದ್ಯೆಯ ಉಪದೇಶಗಳನ್ನು ಕೂಡ ಮಾಡಿದ ಸ್ವಾಮಿ ತ್ರಿಗುಣಾತೀತಾನಂದರನ್ನು ನಮಿಸುತ್ತೇನೆ.

**ಮಹೇಂದ್ರಂ ಭಕ್ತವರ್ಯಂ ಚ ವಿದ್ಯಾವಿನಯಭೂಷಣಮ್ ।**
**ಕಥಾಮೃತಂ ಪಿಬಂತಂ ತಂ ಸ್ವಗುರೋಃ ಪ್ರಣಮಾಮ್ಯಹಮ್ ॥ ೧೯ ॥**

ಭಕ್ತಶ್ರೇಷ್ಠನಾದ, ವಿದ್ಯೆ-ವಿನಯಗಳೇ ಭೂಷಣವಾಗಿರುವ, ತಮ್ಮ ಗುರುವಿನ 'ವಚನಾಮೃತ'ವನ್ನು ಕುಡಿಯುತ್ತಿರುವ ಮಹೇಂದ್ರನಾಥ ಗುಪ್ತ ('ಮ')ನನ್ನು ನಮಿಸುತ್ತೇನೆ.

**ಗಿರೀಶಂ ಭೈರವಂ ವಂದೇ ಭಕ್ತಿನಿರ್ಧೂತಕಲ್ಮಷಮ್ ।**
**ಶ್ರದ್ಧಯಾರ್ಜಿತಸಂಸಿದ್ಧಿಂ ನಟಶ್ರೇಷ್ಠಂ ಕಲಾವಿದಮ್ ॥ ೨೦ ॥**

ಶ್ರೇಷ್ಠ ನಾಟಕಕಾರನೂ, ಕಲಾವಿದನೂ ಆಗಿರುವ, ಭಕ್ತಿಯ ಮೂಲಕ ಎಲ್ಲ ಮಲಿನತೆಯನ್ನೂ ತೊಳೆದುಕೊಂಡ, ಶ್ರದ್ಧೆಯಿಂದಲೇ ಸಿದ್ಧಿಯನ್ನು ಪಡೆದ, ಭೈರವನ ಅವತಾರವಾಗಿರುವ ಗಿರೀಶಚಂದ್ರ ಘೋಷನನ್ನು ವಂದಿಸುತ್ತೇನೆ.

**ನಾಗಮಹಾಶಯಂ ವಂದೇ ಭಕ್ತಶ್ರೇಷ್ಠಂ ಮುಹುರ್ಮುಹುಃ।**
**ಅತ್ಯದ್ಭುತಚರಿತ್ರಂ ಚಾಮಾನಿನಂ ಮಾನದಂ ವರಮ್ ॥ ೨೧ ॥**

ಅತ್ಯದ್ಭುತವಾದ ಚರಿತ್ರದಿಂದ ಕೂಡಿರುವ, ಅತ್ಯಂತ ಮಾನಹೀನರಿಗೂ ಶ್ರೇಷ್ಠ ಮರ್ಯಾದೆಯನ್ನು ನೀಡಿದ ಭಕ್ತಶ್ರೇಷ್ಠ ನಾಗಮಹಾಶಯನನ್ನು ಪದೇ ಪದೇ ವಂದಿಸುತ್ತೇನೆ.

**ಬಲರಾಮಂ ರಾಮಚಂದ್ರಂ ಸುರೇಶಂ ಶಂಭುಮಲ್ಲಿಕಮ್ ।**
**ಅನ್ಯಾನ್ ಭಕ್ತಗಣಾನ್ ವಂದೇ ರಾಮಕೃಷ್ಣಪದಾಶ್ರಿತಾನ್ ॥ ೨೨ ॥**

ಶ್ರೀರಾಮಕೃಷ್ಣರ ಪಾದಗಳನ್ನು ಆಶ್ರಯಿಸಿರುವ ಬಲರಾಮ ಬಸು, ರಾಮಚಂದ್ರ ದತ್ತ, ಸುರೇಶಚಂದ್ರ ಮಿತ್ರ, ಶಂಭುಮಲ್ಲಿಕ ಹಾಗೂ ಇತರ ಭಕ್ತಗಣವನ್ನು ವಂದಿಸುತ್ತೇನೆ.

**ಏಕಂ ಯಂ ಗುಣನಾಮರೂಪಭಿರ್ಹಿಂದುಃ ಸದಾ ಗಾಯತಿ**
**ಯಶ್ಚೈವ ಬೌದ್ಧಶಾಸನರತೈರ್ಬುದ್ಧೇತಿ ಸಂಪೂಜಿತಃ ।**
**ಪುನರೇವ ಮೇರಿತನಯೋ ಭೂತ್ವಾರ್ಚಿತೋ ಬಹುಜನೈ-**
**ರ್ಯಂ ಚೈವ ಪುನರಲ್ಲಮನಿಶಂ ತಂ ರಾಮಕೃಷ್ಣಂ ಭಜೇ ॥ ೨೩ ॥**

ಯಾರನ್ನು ಹಿಂದುಗಳು ವಿವಿಧ ಗುಣ, ನಾಮ, ರೂಪಗಳಿಂದ ಸದಾ ಸ್ತುತಿಸುವರೋ, ಯಾರನ್ನು ಬೌದ್ಧಮತದವರು ಬುದ್ಧನೆಂದು ಪೂಜಿಸಿರುವರೋ, ಯಾರು ಮೇರಿಯ ಪುತ್ರ ಕ್ರಿಸ್ತನಾಗಿ ಅನೇಕರಿಂದ ಅರ್ಚಿಸಲ್ಪಡುತ್ತಿರುವನೋ, ಹಾಗೂ ಯಾರನ್ನು ಅಲ್ಲಾಎಂದು ಮುಸಲ್ಮಾನರು ಪೂಜಿಸುವರೋ ಅಂತಹ ಭಗವಂತನಾದ ಶ್ರೀರಾಮಕೃಷ್ಣರನ್ನು ಭಜಿಸುತ್ತೇನೆ.

**ಅಸಂಖ್ಯಭಕ್ತಮಧುಪಾ ಯತ್ಪಾದಕಮಲಾಶ್ರಿತಾಃ ।**
**ಯತ್ರ ಪ್ರೇಮಪ್ರಮತ್ತಾಸ್ತೇ ತತ್ಪಾದಂ ಶರಣಂ ವ್ರಜೇ ॥ ೨೪ ॥**

ಯಾರ ಪಾದಗಳೆಂಬ ಕಮಲಗಳನ್ನು ಭಕ್ತರೆಂಬ ಅಸಂಖ್ಯಾತ ದುಂಬಿಗಳು ಆಶ್ರಯಿಸಿರುವವೋ, ಯಾರಲ್ಲಿ ಅವರೆಲ್ಲ ಪ್ರೇಮದಿಂದ ಮತ್ತರಾಗಿರುವರೋ, ಅಂತಹ ಶ್ರೀರಾಮಕೃಷ್ಣರ ಪಾದಗಳಲ್ಲಿ ನಾನು ಶರಣಾಗುತ್ತೇನೆ.

**ಏತೇನ ಸ್ತೋತ್ರಪುಷ್ಪೇಣ ಭಕ್ತ್ಯಾ ಸುವಾಸಿತೇನ ಚ ।**
**ಯೋಽರ್ಚಂತಿ ರಾಮಕೃಷ್ಣಂ ಹಿ ಬ್ರಹ್ಮೇಶಪದಮಾಪ್ನುಯಾತ್ ॥ ೨೫ ॥**

ಯಾರು ಭಕ್ತಿಯ ಸುವಾಸನೆಯಿಂದ ಕೂಡಿದ ಈ ಸ್ತೋತ್ರಪುಷ್ಪಗಳಿಂದ ಶ್ರೀರಾಮಕೃಷ್ಣರನ್ನು ಅರ್ಚಿಸುವರೋ ಅವರು ಪರಬ್ರಹ್ಮನ ಪದವಿಯನ್ನು ಹೊಂದುವರು.



# ಕಳೆದ ದಿನಗಳ ನೆನಪುಗಳು

(ಸ್ವಾಮಿ ವಿರಜಾನಂದರ ಜೀವನ ಹಾಗೂ ಕೆಲವು ಸಮಕಾಲೀನ ಘಟನೆಗಳು)

ಮೂಲ ಬಂಗಾಳಿ: ಸ್ವಾಮಿ ಶ್ರದ್ಧಾನಂದ

ಅನುವಾದ: ಪ್ರವ್ರಾಜಿಕಾ ಯೋಗಾತ್ಮಪ್ರಾಣಾ

## ಭಾಗ ೧೧

**ಕಾ**ಳೀಕೃಷ್ಣರ ನೆನಪುಗಳು:

''ಮಠದ ದೈನಂದಿನ ಕೆಲಸಗಳಿಂದ ಬಿಡುವಾಗುತ್ತಿರಲಿಲ್ಲವಾದ್ದರಿಂದ ಗೋಪಾಲ್ ಶೀಲರ ತೋಟಕ್ಕೆ ಎಂದೂ ಹೋಗಲಾಗಲಿಲ್ಲ. ಆದರೆ ಸಂಜೆಯ ನಂತರ ಅವರು ಮಠಕ್ಕೆ ಬಂದರೆ, ಒಂದು ಮೂಲೆಯಲ್ಲಿ ಚಿತ್ರದಲ್ಲಿ ಬರೆದ ಹಾಗೆ ಅಲುಗಾಡದೆ ಕುಳಿತು ಎಲ್ಲರೊಂದಿಗೆ ಸ್ವಾಮಿ ವಿವೇಕಾನಂದರ ಮಾತುಗಳನ್ನು ಕೇಳುತ್ತಿದ್ದೆ. ಅವರ ಮಾತುಗಳಲ್ಲಿದ್ದ ಶಕ್ತಿ ಅತ್ಯದ್ಭುತ!

''ಸ್ವಾಮೀಜಿಯವರೊಡನೆ ಲಂಡನ್ನಿನಿಂದ ಅವರ ಶಿಷ್ಯ ದಂಪತಿಗಳಾದ ಕ್ಯಾಪ್ಟನ್ ಹಾಗೂ ಮಿಸೆಸ್ ಸೇವಿಯರ್, ಮಿಸ್ಟರ್ ಗುಡ್‌ವಿನ್, ಸಿಂಹಳದಿಂದ ಬೌದ್ಧ ಮಿಸ್ಟರ್ ಹ್ಯಾರಿಸನ್ ಮತ್ತು ಚೆನ್ನೈನಿಂದ ಈ ಹಿಂದೆಯೇ ಸ್ವಾಮೀಜಿಯವರ ಶಿಷ್ಯರಾಗಿದ್ದ ಜಿ.ಜಿ, ಆಳಸಿಂಗ ಮತ್ತು ಕಿಡಿ ಇವರುಗಳು ಬಂದಿದ್ದರು. ಮಿ. ಗುಡ್‌ವಿನ್ ಹಾಗೂ ಮದ್ರಾಸಿ ಶಿಷ್ಯರು ಸ್ವಾಮೀಜಿಯವರ ಜೊತೆ ಜೊತೆಗೇ ಇರುತ್ತಿದ್ದರು. ರಾತ್ರಿಯನ್ನು ಅವರು ಮಠದಲ್ಲೇ ಕಳೆಯುತ್ತಿದ್ದರು. ಗುಡ್‌ವಿನ್ ಹಗಲಿರುಳೂ ಸ್ವಾಮೀಜಿಯವರ ಸೇವೆ ಮಾಡುತ್ತಿದ್ದ; ನೆರಳಿನಂತೆ ಅವರೊಂದಿಗೇ ಇರುತ್ತಿದ್ದ. ಅವನದು ಅದೆಂತಹ ಅದ್ಭುತವಾದ ಸೇವೆ! ಚಿಕ್ಕ ಹುಡುಗನಂತೆ ಅವನ ಸ್ವಭಾವ. ಮಠದ ಎಲ್ಲರೊಡನೆ ತಮಾಷೆ, ನಗು, ಆಟ ಮತ್ತು ಹುಡುಗಾಟದಲ್ಲಿ ತೊಡಗುತ್ತಿದ್ದ.

''ಮದರ್ (ಮಿಸೆಸ್ ಸೇವಿಯರ್) ಶೀಲರ ತೋಟದಲ್ಲಿ ಸ್ವಾಮೀಜಿಯವರ ಸೇವೆ ಮತ್ತು ಸೌಲಭ್ಯಗಳಲ್ಲೇ ಸರ್ವದಾ ತತ್ಪರರಾಗಿರುತ್ತಿದ್ದರು. ಸ್ವಾಮೀಜಿಯವರು ಅಲ್ಲಿ ಮಧ್ಯಾಹ್ನದ ಊಟ ಮತ್ತು ಸಂಜೆಯ ಚಹಾವನ್ನು ತೆಗೆದುಕೊಳ್ಳುತ್ತಿದ್ದರು. ಸೇವಿಯರ್ ದಂಪತಿಗಳು ಆಲಂಬಜಾರಿನ ಮಠಕ್ಕೆ ಒಂದೆರಡು ಬಾರಿ ಬಂದಿದ್ದರು. ಆಗ ಅವರನ್ನು ನಿರಂಜನ್ ಮಹಾರಾಜರು ಮತ್ತು ಹುಟ್ಕೋ ಗೋಪಾಲರು ನೋಡಿಕೊಳ್ಳುತ್ತಿದ್ದರು. ನಿರಂಜನ್ ಮಹಾರಾಜರ ಸೌಮ್ಯತೆ ಹಾಗೂ ವೀರರಂಥಹ ನಡೆನುಡಿಗಾಗಿ ಅವರನ್ನು ಮಿಸೆಸ್ ಸೇವಿಯರ್ ತುಂಬ ಇಷ್ಟಪಡುತ್ತಿದ್ದರು. ''He looks like a prince (ಅವನು ರಾಜಕುಮಾರನಂತೆ ಕಾಣುತ್ತಾನೆ)'' ಎನ್ನುತ್ತಿದ್ದರು. ಶಿಕಾಗೋದ ಡಾ. ಟರ್ನ್‌ಬುಲ್ ಎಂಬವರು ಸ್ವಾಮೀಜಿಯವರು ಸ್ವದೇಶಕ್ಕೆ ಹಿಂತಿರುಗುವುದಕ್ಕೆ ಕೆಲವು ತಿಂಗಳ ಹಿಂದೆಯೇ ಭಾರತದಲ್ಲಿದ್ದರು. ಅವರು ಕೊಲ್ಕತ್ತೆಯಲ್ಲಿದ್ದಾಗ ಬೇಲೂರು ಮಠಕ್ಕೆ ಹೋಗಿಬಂದು ಮಾಡುತ್ತಿದ್ದರು. ಅನೇಕ ಗೃಹಸ್ಥ ಭಕ್ತರೊಂದಿಗೆ ಪರಿಚಿತರಾಗಿದ್ದರು. ಶಿಕಾಗೋ ಹಾಗೂ ಅಮೆರಿಕಾದಲ್ಲಿ ಸ್ವಾಮೀಜಿಯವರು ಮಾಡಿದ ಅದ್ಭುತ ಕಾರ್ಯಗಳನ್ನು ಮತ್ತು ಅವರ ಯಶಸ್ಸು, ಕೀರ್ತಿ ಮುಂತಾದ ಅನೇಕ ವಿಷಯಗಳನ್ನು ಅವರ ಬಾಯಿಯಿಂದ ಕೇಳುತ್ತಿದ್ದೆ. ಸ್ವಾಮೀಜಿಯವರು ಕೊಲ್ಕತ್ತೆಗೆ ಬಂದರೆ ಡಾ. ಟರ್ನ್‌ಬುಲ್ ಸಾಧಾರಣವಾಗಿ ಅವರನ್ನು ಕಾಣಲು ಬರುತ್ತಿದ್ದರು.

''ಖೇತ್ರಿಯ ಮಹಾರಾಜರು ಸ್ವಾಮೀಜಿಯವರನ್ನು ನೋಡುವ ಸಲುವಾಗಿ ತಮ್ಮ ಸೆಕ್ರೆಟರಿಯಾದ ಮುನ್ಷಿ ಜಗಮೋಹನರೊಂದಿಗೆ ಕೊಲ್ಕತ್ತೆಗೆ ಬಂದು ಕೆಲವು ದಿನಗಳಿದ್ದರು. ಮಹಾರಾಜರು ಆಲಂಬಜಾರಿನ ಮಠಕ್ಕೆ ಬಂದು ದೇವರ ದರ್ಶನ ಮಾಡಿ, ನಂತರ ಹಜಾರದಲ್ಲಿ ಹಾಸಿದ್ದ ಜಮಖಾನೆಯ ಮೇಲೆ ಸ್ವಾಮೀಜಿಯ ಮುಂದೆ ಮಂಡಿಯೂರಿ ಕುಳಿತು, ಭಕ್ತಿಭಾವದಿಂದ ಕೈಮುಗಿದುಕೊಂಡು ಬಹಳ ಹೊತ್ತಿನವರೆಗೂ ಸಂಭಾಷಣೆ ನಡೆಸುತ್ತಿದ್ದರು. ಆತನ ಸರಳ ಪೋಷಾಕನ್ನೂ ವಿನೀತ ಭಾವವನ್ನೂ ನೋಡಿ ಎಲ್ಲರೂ ಪ್ರಭಾವಿತರಾಗಿದ್ದರು. ಸ್ವಾಮೀಜಿಯವರ ಆದೇಶದಂತೆ ಆತನ ಸಲುವಾಗಿ ಠಾಕೂರರಿಗೆ ವಿಶೇಷವಾಗಿ ಹಣ್ಣು, ಸಿಹಿತಿಂಡಿ ಮತ್ತು ಹಲ್ವವನ್ನು ನೈವೇದ್ಯ ಮಾಡುವ ವ್ಯವಸ್ಥೆಯಾಗಿತ್ತು. ಸುಶೀಲನು ಅಡಿಗೆ ಮನೆಯಲ್ಲಿ ಆ ಹಲ್ವವನ್ನು ತಯಾರಿಸುತ್ತಿದ್ದನು. ಇನ್ನೇನು ಸಿದ್ಧವಾಯಿತೆನ್ನುವಾಗ ಹರಿ ಮಹಾರಾಜರು ಅಲ್ಲಿಗೆ ಹಠಾತ್ತಾಗಿ ಬಂದು, ಸುಶೀಲನ ಕೈಯಿಂದ ಮಗುಚುವ ಸೌಟನ್ನು ತೆಗೆದುಕೊಂಡು ಒಮ್ಮೆ ಆಡಿಸಿ ನೋಡಿದರು. ಅದು ಸ್ವಲ್ಪ ಹೆಚ್ಚಾಗಿಯೇ ಗಟ್ಟಿಯಾದಂತೆ ಅವರಿಗೆ ಕಂಡಿತು. ಕೂಡಲೇ ಇಳಿಸಿಬಿಡಲು ಹೇಳಿದರು. ಇಳಿಸುವಷ್ಟರಲ್ಲೇ ಅದು ಗಟ್ಟಿ ಗೋಂದಿನಂತಾಗಿಬಿಟ್ಟಿತ್ತು. ಸುಶೀಲನು ಗಾಬರಿಯಿಂದ, ''ಮಹಾರಾಜ್ ಏನಿದು ವಿಚಿತ್ರ! ಸರಿಯಾಗಿಯೇ ಆಗುತ್ತಿತ್ತು, ನೀವು ಕೈಹಾಕಿದ್ದೇ ತಡ ಗಟ್ಟಿಯಾಗಿಬಿಟ್ಟಿತಲ್ಲ!'' ಎಂದ. ಈ ಮಾತನ್ನೇ ಹಿಡಿದುಕೊಂಡು ಅಂದಿನಿಂದ ಹರಿ ಮಹಾರಾಜರು ಸುಶೀಲನನ್ನು, ''ಏನು ಸುಶೀಲ್, ನಿನ್ನ ಹಲ್ವಾ ಚೆನ್ನಾಗಿಯೇ ಆಗುತ್ತಿತ್ತು, ನಾನು ಕೈ ಹಾಕಿದ್ದೇ ತಡ ಗಟ್ಟಿಯಾಗಿಬಿಟ್ಟಿತಲ್ಲವೆ?'' ಎಂದು ತಮಾಷೆ ಮಾಡುತ್ತಿದ್ದರು. ಆದರೆ ಏನಾಶ್ಚರ್ಯ, ಅಂದಿನ ಹಲ್ವಾ ಎಂತಹ ಒಂದು ನೂತನ ಬಗೆಯ ಆಸ್ವಾದಿಸುವಂತಹ ತಿನಿಸಾಗಿ ಮಾರ್ಪಟ್ಟಿತೆಂದರೆ, ತಿಂದವರೆಲ್ಲಾ ಅದನ್ನು ಹೊಗಳತೊಡಗಿದರು.''

ಕಾಳೀಕೃಷ್ಣನ ಹಿಂದಿನ ಸ್ನೇಹಿತ ಬಳಗದವರ ಪೈಕಿ ಇನ್ನೂ ಮನೆಯಲ್ಲಿದ್ದು ಕಾಲೇಜಿನಲ್ಲಿ ಓದುತ್ತಿದ್ದ ಖಗೇನ್, ಸುಧೀರ್, ಹರಿಪದ, ಶುಕುಲ್ (ನಂತರ ಕ್ರಮವಾಗಿ ವಿಮಲಾನಂದ, ಶುದ್ಧಾನಂದ, ಬೋಧಾನಂದ, ಆತ್ಮಾನಂದ) ಇವರು ಸ್ವಾಮೀಜಿಯವರ ಜ್ವಲಂತ ತ್ಯಾಗದ ಉಪದೇಶದಿಂದ ಪ್ರಭಾವಿತರಾಗಿ ಮಠಕ್ಕೆ ಸೇರಿದರು. ಕಾನ್ಹಾಯ್ (ನಿರ್ಭಯಾನಂದ) ಮತ್ತು ಸುಶೀಲ್[೧] (ಪ್ರಕಾಶಾನಂದ) ಇದಕ್ಕೆ ಮೊದಲೇ ಮಠಕ್ಕೆ ಬಂದುಬಿಟ್ಟಿದ್ದರು. ಈ ರೀತಿ ವಿದ್ಯಾವಂತರೂ, ಸಚ್ಚರಿತ್ರರೂ, ಉತ್ಸಾಹಿಗಳೂ, ವೈರಾಗ್ಯ ದೀಪ್ತರೂ ಆದ ಆ ಯುವಕರನ್ನು ಪಡೆದ ಸ್ವಾಮೀಜಿಯವರ ಆನಂದಕ್ಕೆ ಪಾರವೇ ಇರಲಿಲ್ಲ.

ಸ್ವಾಮೀಜಿಯವರು ಬಂದಾಗಿನಿಂದಲೂ ಬಹಳ ಜನರು ಮಠಕ್ಕೆ ಬಂದು ಹೋಗುತ್ತಿದ್ದರು. ಅಲ್ಲದೇ ಚೆನ್ನೈ ಭಕ್ತರ ಇರುವಿಕೆಯಿಂದ ಮಠವು ಕಲಕಲವೆನ್ನುತ್ತಿತ್ತು. ಚೆನ್ನೈ ಭಕ್ತರಿಗೋಸ್ಕರ ಮೆಣಸಿನಕಾಯಿ ಹಾಗೂ ಹುಣಿಸೇಹಣ್ಣು ಹಾಕಿದ ಬಿಸಿಬಿಸಿ ರಸಂ, ಕೊಳಂಬು ತಯಾರಾಗುತ್ತಿತ್ತು. ಅದನ್ನು ಕಿಡಿ[೨] (ಸಿಂಗಾರ ವೇಲು ಮೊದಲಿಯಾರ್) ತಯಾರಿಸುತ್ತಿದ್ದರು. ಅವರು ತುಂಬ ಸರಳರೂ, ವಿನೋದಪ್ರಿಯರೂ ಆಗಿದ್ದರು. ಅವರೊಂದಿಗೆ ಮತ್ತು ಸ್ವಾಮೀಜಿಯವರ ಯುವಶಿಷ್ಯ ಗುಡ್‌ವಿನ್‌ರೊಂದಿಗೆ ಎಲ್ಲರೂ ತುಂಬ ವಿನೋದಿಸುತ್ತಿದ್ದರು.

ಸ್ವಾಮೀಜಿ ಸಾಮಾನ್ಯವಾಗಿ ಹಜಾರದಲ್ಲಿ ಎಲ್ಲರೊಡನೆ ಕುಳಿತುಕೊಳ್ಳುತ್ತಿದ್ದರು. ಒಳಮನೆಯ ಮಲಗುವ ಕೊಠಡಿಯಲ್ಲೂ ಕೆಲವೊಮ್ಮೆ ಗುರುಭಾಯಿಯವರೊಡನೆ ಕುಳಿತು ಹಾಸ್ಯ-ವಿನೋದಗಳಲ್ಲಿ ತೊಡಗುತ್ತಿದ್ದರು. ಬೆಳಗ್ಗೆ ೮.೩೦ ಅಥವಾ ೯.೦೦ಕ್ಕೆ ಹಜಾರದಲ್ಲಿ ಇಲ್ಲವೇ ಒಳಗಿನ ವರಾಂಡದಲ್ಲಿ ಗೀತೆ, ಉಪನಿಷತ್ ಅಥವಾ ಪ್ರಶ್ನೋತ್ತರದ ಕ್ಲಾಸ್ ನಡೆಯುತ್ತಿತ್ತು. ಬ್ರಹ್ಮಚಾರಿಗಳು ಮತ್ತು ಸಾಧುಗಳು ಉಪಸ್ಥಿತರಿರುತ್ತಿದ್ದರು. ಕಾಳೀಕೃಷ್ಣರು ಈ ಸಮಯದಲ್ಲಿ ದೇವರಮನೆಯ ಕೆಲಸವನ್ನು ಮಾಡುತ್ತಿದ್ದರು. ಪೂಜೆಗೆ ಅಣಿ ಮಾಡುವ ಕಾರ್ಯವನ್ನು ಅಷ್ಟರೊಳಗೆ ಮುಗಿಸಲಾಗದ್ದರಿಂದ ಅನೇಕ ದಿನ ಅವರಿಗೆ ಕ್ಲಾಸಿಗೆ ಹೋಗಲಾಗುತ್ತಿರಲಿಲ್ಲ. ಸ್ವಾಮೀಜಿಯವರು ಇದನ್ನು ಗಮನಿಸಿದ್ದರು. ಒಂದು ದಿನ ಕ್ಲಾಸಿನ ಸಮಯದಲ್ಲಿ ಕಾಳೀಕೃಷ್ಣನೆಲ್ಲಿ ಎಂದು ವಿಚಾರಿಸಿದರು. ಅವರು ಬಂದಾಗ, ''ಏನೋ ಕಾಳೀಕೃಷ್ಣ, ಕ್ಲಾಸಿಗೆ ಏಕೆ ಬರಲಿಲ್ಲ? ಏನು ಮಾಡುತ್ತಿದ್ದೆ? ಠಾಕೂರರಿಗೆ ನೆನಸಿದ ಕಡ್ಲೆ ಕಾಳಿನ ಸಿಪ್ಪೆಯನ್ನು ಒಂದೊಂದಾಗಿ ಬಿಡಿಸುತ್ತಿದ್ದೆಯೇನು? ಎಲ್ಲಿ ಕರೆ ಶಶಿಯನ್ನು'' ಎಂದರು.

ಶಶಿ ಮಹಾರಾಜರು ಬಂದಾಗ ಸ್ವಾಮೀಜಿಯವರು ಉತ್ತೇಜಿತರಾಗಿ, ''ಏನು ಶಶಿ, ಈ ಹುಡುಗರೆಲ್ಲ ಮನೆಬಾಗಿಲು ಬಿಟ್ಟು ಬಂದದ್ದು ನಿನ್ನ ಠಾಕೂರರ ಕಡ್ಲೇಕಾಳಿನ ಸಿಪ್ಪೆಯನ್ನು ಬಿಡಿಸಲೇನು? ಅದೆಲ್ಲ ನಡೆಯುವುದಿಲ್ಲ. ಜಪ-ಧ್ಯಾನ, ಅಧ್ಯಯನಗಳನ್ನು ಎಲ್ಲರೂ ಸಮಯಕ್ಕೆ ಸರಿಯಾಗಿ ಮಾಡಲೇಬೇಕು'' ಎಂದರು.

ಶಶಿ ಮಹಾರಾಜರು ತಲೆತಗ್ಗಿಸಿಕೊಂಡು ಸುಮ್ಮನೆ ನಿಂತಿದ್ದು ಹೊರಟುಹೋದರು. ಅಂದಿನಿಂದ ಕಾಳೀಕೃಷ್ಣರು ಸಮಯಕ್ಕೆ ಸರಿಯಾಗಿ ಕ್ಲಾಸಿಗೆ ಹೋಗಲೆಂದು ಅವನ ಪಾಲಿನ ಅನೇಕ ಕೆಲಸಗಳನ್ನು ಶಶಿ ಮಹಾರಾಜರು ತಾವೇ ಮಾಡಿಬಿಡುತ್ತಿದ್ದರು. ಕಾಳೀಕೃಷ್ಣರೂ ಸಹ ಬೇಗ ಕೆಲಸ ಮುಗಿಸಲು ಪ್ರಯತ್ನಿಸುತ್ತಿದ್ದರು.[೩]

* * *

ಕಾಳೀಕೃಷ್ಣರು ಎರಡು ವರ್ಷಗಳ ಹಿಂದೆ ಶ್ರೀಮಾತೆಯವರಿಗೆ ಬರೆದ ಪತ್ರದಲ್ಲಿ ತಮ್ಮ ಹೃದಯದ ವ್ಯಾಕುಲತೆಯನ್ನು ತೋಡಿಕೊಳ್ಳುತ್ತ, ''ಅಮ್ಮ, ನಿಮ್ಮ ಕೃಪೆಯೇನಾದರೂ ಇದ್ದರೆ ಅತಿ ದೀನನಾದ ನಾನೂ ಸಹ ಸಂನ್ಯಾಸಿಯಾಗಲು ಸಾಧ್ಯವಿಲ್ಲವೇನು?'' ಎಂದು ಬರೆದಿದ್ದರು. ಆ ವ್ಯಾಕುಲತೆಯಿಂದ ಕೂಡಿದ ಆಕಾಂಕ್ಷೆಯು ಪೂರ್ಣವಾಗುವ ದಿನ ಬಂದಿತು. ಆಲಂಬಜಾರಿನ ಮಠದಲ್ಲಿ ಸ್ವಾಮೀಜಿಯವರು ಮೊದಲ ಬಾರಿ ನಾಲ್ವರಿಗೆ ಸಂನ್ಯಾಸ ನೀಡಲು ಸಂಕಲ್ಪ ಮಾಡಿದಾಗ, ಆ ನಾಲ್ವರಲ್ಲಿ ಕಾಳೀಕೃಷ್ಣರೂ ಒಬ್ಬರಾಗಿದ್ದರು. ಮಿಕ್ಕ ಮೂವರು ಸುಶೀಲ್, ಕಾನ್ಹಾಯ್ ಮತ್ತು ಯೋಗೇನ್ ಚಟರ್ಜಿ ಮಹಾಶಯರು. ಶ್ರೀರಾಮಕೃಷ್ಣರ ದೇಹ ತ್ಯಾಗದ ನಂತರ ಸ್ವಾಮೀಜಿ ಹಾಗೂ ಅವರ ತ್ಯಾಗೀ ಗುರುಭಾಯಿಗಳು ವರಾಹನಗರದ ಮಠದಲ್ಲಿ ಶ್ರೀರಾಮಕೃಷ್ಣರ ಚಿತ್ರಪಟದ ಸಮ್ಮುಖದಲ್ಲಿ ವಿರಜಾಹೋಮ ಮಾಡಿ ಆನುಷ್ಠಾನಿಕ ಸಂನ್ಯಾಸ ಕೈಗೊಂಡ ನಂತರ ನಡೆದ ಮೊದಲ ಯಜ್ಞವೆಂದರೆ ಇದೇ.

ಕಾಳೀಕೃಷ್ಣರ ಲಿಖಿತ ಸ್ಮೃತಿಯಲ್ಲಿ ಇಂತಿದೆ:

---

೧ ಸುಶೀಲನು ೧೮೯೬ರ ಝೂಲನ್ ಉತ್ಸವದ ಸಮಯದಲ್ಲಿ ಶ್ರೀಮಾತೆಯವರ ಅನುಮತಿ ಪಡೆದು ಸಂಸಾರ ತ್ಯಾಗ ಮಾಡಿದ್ದನು ಹಾಗೂ ಕೆಲವು ದಿನ ಬೃಂದಾವನದಲ್ಲಿ ಬಾಬುರಾಮ್ ಮಹಾರಾಜರೊಂದಿಗಿದ್ದು, ನಂತರ ತೀರ್ಥಯಾತ್ರೆಗೆ ಹೋಗಿದ್ದನು.

೨ ಇವರು ಮೊದಲು ರಸಾಯನಶಾಸ್ತ್ರದ ಅಧ್ಯಾಪಕರೂ, ಘೋರ ನಾಸ್ತಿಕರೂ ಆಗಿದ್ದರು. ಸ್ವಾಮೀಜಿಯವರ (ಅಮೆರಿಕಾಗೆ ಹೋಗುವ ಮುನ್ನ) ಸಂಸರ್ಗಕ್ಕೆ ಬಂದು ಅವರು ಆಸ್ತಿಕರಾದರು. 'ಕಿಡಿ'ಯನ್ನುದ್ದೇಶಿಸಿ ಸ್ವಾಮೀಜಿ ತಮಾಷೆಯಾಗಿ ಹೇಳುತ್ತಿದ್ದರು, 'ಸೀಜರ್ ಬಂದ, ನೋಡಿದ ಮತ್ತು ಜಯಿಸಿದ. ಆದರೆ ಕಿಡಿ ಬಂದ, ನೋಡಿದ ಮತ್ತು ಜಯಿಸಲ್ಪಟ್ಟ'. ಅಧ್ಯಾಪಕ ವೃತ್ತಿಯನ್ನು ತ್ಯಜಿಸಿ, ಜೀವನದ ಕೊನೆಯವರೆಗೂ ತಮ್ಮನ್ನು ತಾವು ಸಾಧನೆಯಲ್ಲಿ ಮತ್ತು ಸ್ವಾಮೀಜಿಯವರ ಕೆಲಸದಲ್ಲಿ ತೊಡಗಿಸಿಕೊಂಡಿದ್ದರು. 'ಕಿಡಿ' (ತಮಿಳಿನಲ್ಲಿ ಕಿಳಿ- ಅಂದರೆ 'ಗಿಳಿ') ಎಂಬ ಹೆಸರನ್ನು ಇವರಿಗೆ ಸ್ವಾಮೀಜಿಯವರೇ ಕೊಟ್ಟಿದ್ದರು.

೩ ''ಶಶಿ ಮಹಾರಾಜರು ಕೆಲಸದಲ್ಲಿ ತುಂಬ ಚುರುಕು, ರೆಪ್ಪೆ ಬಡಿಯುವಷ್ಟರಲ್ಲಿ ಬೇಕಾದಷ್ಟು ಕೆಲಸಗಳನ್ನು ಮಾಡಿ ಮುಗಿಸುತ್ತಿದ್ದರು. ಆದರೆ ನಾನು ಸ್ವಲ್ಪ ನಿಧಾನಿಯೇ. ಸಾಧ್ಯವಾದಷ್ಟೂ ನಾನು ದೇವರ ಮನೆಯ ಕೆಲಸವನ್ನು ಬಹಳ ಎಚ್ಚರಿಕೆಯಿಂದ ಮಾಡುತ್ತಿದ್ದೆನಾದರೂ, ಅವರಿಂದ ಬೈಸಿಕೊಳ್ಳದ ದಿನವೇ ಇರುತ್ತಿರಲಿಲ್ಲ; ಅವರಿಗೆ ಕಾಣದಂತೆ ಕಣ್ಣೀರು ಸುರಿಸುತ್ತ ಕೆಲಸ ಮಾಡುತ್ತಿದ್ದೆ. ಆದರೆ ಶಶಿ ಮಹಾರಾಜರು ಹೇಗೆ ಬಯ್ಯುತ್ತಿದ್ದರೋ ಹಾಗೆಯೇ ಪ್ರೀತಿಯನ್ನು ಸಹ ತೋರುತ್ತಿದ್ದರು. ದೇವರ ನೈವೇದ್ಯವಾದ ಮೇಲೆ ಪ್ರಸಾದದ ಸಂದೇಶವನ್ನು ನನ್ನ ಬಾಯಿಗಿಡುತ್ತ ಮತ್ತೊಂದು ಕೈಯಿಂದ ನನ್ನ ಮೈ ಸವರುತ್ತಿದ್ದರು. *(ಸ್ವಾಮಿ ವಿರಜಾನಂದರ ಲಿಪಿಬದ್ಧ ಸ್ಮೃತಿ).*

''ಸಂನ್ಯಾಸ ಗ್ರಹಣದ ಹಿಂದಿನ ದಿನ ಮಸ್ತಕ ಮುಂಡನ ಮತ್ತು ಗಂಗಾಸ್ನಾನ ಮಾಡಿಕೊಂಡು ನಾವು ಸ್ವಾಮೀಜಿಯವರಿಗೆ ಪ್ರಣಾಮ ಸಲ್ಲಿಸಿ, ಅವರ ಪ್ರೀತಿಯ ಆಶೀರ್ವಾದಗಳನ್ನು ಹೊತ್ತು ನಂತರ ಯಥಾವಿಧಿ ಹವಿಷ್ಯಾನ್ನಾದಿ ಸಂಯಮಗಳನ್ನು ಪಾಲಿಸಿದೆವು. ಮರುದಿನ ಸ್ವಾಮೀಜಿಯವರ ಗೃಹಸ್ಥ ಶಿಷ್ಯ ಶ್ರೀ ಶರತ್ ಚಕ್ರವರ್ತಿಯವರ ಪೌರೋಹಿತ್ಯ ಹಾಗೂ ಮಾರ್ಗದರ್ಶನದಲ್ಲಿ ಮಂತ್ರೋಚ್ಚಾರ ಪೂರ್ವಕ, ಪೂರ್ವಿಕರಿಗೆ ಮತ್ತು ನಮಗೆ ಪಿಂಡ ಪ್ರದಾನ ಮಾಡಿ, ಆತ್ಮಶ್ರಾದ್ಧವನ್ನು ಮಾಡಿಕೊಂಡೆವು. ಶ್ರಾದ್ಧದ ಕೊನೆಯಲ್ಲಿ ನಾವು ನಮ್ಮ ನಮ್ಮ ಪಿಂಡವನ್ನು ಗಂಗೆಯಲ್ಲಿ ನಿಕ್ಷೇಪಿಸಿ ಬಂದು ಸ್ವಾಮೀಜಿಯವರಿಗೆ ಸಾಷ್ಟಾಂಗ ಪ್ರಣಾಮ ಮಾಡಿದೆವು. ಅವರು ನಮ್ಮನ್ನು ಆಶೀರ್ವದಿಸಿ, ''ನೀವು ಸಂನ್ಯಾಸ ತೆಗೆದುಕೊಳ್ಳುತ್ತಿದ್ದೀರಿ, ನಿಮ್ಮ ಜನ್ಮ ಧನ್ಯ! '**ಕುಲಂ ಪವಿತ್ರಂ ಜನನೀ ಕೃತಾರ್ಥಾ**' '' ಎಂದರು. ದಿನವಿಡೀ ಉಪವಾಸವಿದ್ದು ವಿರಜಾ ಹೋಮಕ್ಕೆ ಆವಶ್ಯಕವಾದ ಬಿಲ್ವಕಾಷ್ಠ, ಬಿಲ್ವಪತ್ರೆ, ಗವ್ಯ ಘೃತ, ಗೈರಿಕವಸನ – ಕೌಪೀನ ಹಾಗೂ ದಂಡ ಮುಂತಾದವುಗಳನ್ನು ಮಠದ ಸಂನ್ಯಾಸಿಗಳ ಸಹಾಯದಿಂದ ಸಂಗ್ರಹಿಸಿದೆವು. ಹೋಮ ಕುಂಡ ಸಿದ್ಧವಾಯಿತು. ಸಾಮಗ್ರಿಗಳೆಲ್ಲವೂ ಯಥಾಸ್ಥಾನದಲ್ಲಿ ಇಡಲ್ಪಟ್ಟವು. ಯಾವೊಂದು ಮಹಾವ್ರತವನ್ನು ಇಟ್ಟುಕೊಂಡು ಸಂಸಾರತ್ಯಾಗ ಮಾಡಿದ್ದೆವೋ ಅದನ್ನೀಗ ಶಾಸ್ತ್ರವಿಧಿ ಪ್ರಕಾರ ಗುರುಪರಂಪರೆಯಿಂದ ಪ್ರಾಪ್ತವಾದ ಪೂತಮಾರ್ಗದಲ್ಲಿ ಅನುಷ್ಠಾನ ಮಾಡಲು ಹೊರಟಿರುವೆ. ಶೀಘ್ರ ಪ್ರತೀಕ್ಷೆ ಮತ್ತು ದುಸ್ಸಾಧ್ಯ ಜವಾಬ್ದಾರಿಯ ಭಾವನೆಯಿಂದ ಒಮ್ಮೆಗೇ ಉಲ್ಲಾಸ ಮತ್ತು ಒಂದು ರೀತಿಯ ಗುರುಗಂಭೀರ ಆವೇಶದಿಂದ ಕವಿದುಹೋದೆ. ಶ್ರೀರಾಮಕೃಷ್ಣರ ಹಾಗೂ ಶ್ರೀಮಾತೆಯವರ ಚರಣಗಳಲ್ಲಿ ಹೃದಯಾಂತರಾಳದಿಂದ ಭಯಮಿಶ್ರಿತ ವ್ಯಾಕುಲ ಪ್ರಾರ್ಥನೆಯು ಹೊಮ್ಮಲಾರಂಭಿಸಿತು — 'ಹೇ ಪ್ರಭು, ಹೇ ತಾಯೆ, ನೀವು ನನ್ನಲ್ಲಿ ಕೃಪೆಯಿಡಿ, ಎಂದಿಗೂ ನಾನು ಆದರ್ಶದಿಂದ ಚ್ಯುತನಾಗದಂತೆ ರಕ್ಷಿಸಿ, ನಿಮ್ಮ ಶ್ರೀಚರಣಗಳಲ್ಲಿ ನಾನು ತನ್ಮಯನಾಗಿರುವಂತೆ ಅನುಗ್ರಹಿಸಿ.'

''ಆ ದಿನ ರಾತ್ರಿ ಸ್ವಾಮೀಜಿಯವರು ಕೇವಲ ಸಂನ್ಯಾಸ ಧರ್ಮದ ವಿಷಯವಾಗಿ ಮಾತನಾಡಿದರು: 'ಸಂನ್ಯಾಸವಾಗದಿದ್ದರೆ ಯಾರೂ ಬ್ರಹ್ಮಜ್ಞನಾಗಲಾರರು. ತ್ಯಾಗವಿಲ್ಲದೆ ಭಕ್ತಿ–ಮುಕ್ತಿಗಳು ದೊರಕಲಾರವು. ತ್ಯಾಗ, ತ್ಯಾಗ — **ನಾನ್ಯಃ ಪಂಥಾಃ ವಿದ್ಯತೇಽಯನಾಯ**' ಇತ್ಯಾದಿ.[*]

''ನಾವು ನಾಲ್ವರೂ ಅಂದು ರಾತ್ರಿ ಸುಮಾರು ಮೂರು ಗಂಟೆಗೆ ಎದ್ದು, ಶೌಚಾದಿಗಳನ್ನು ಮುಗಿಸಿ ಬಿಳಿಯ ಶುಭ್ರ ವಸ್ತ್ರಗಳನ್ನುಟ್ಟು ವಿಧಿವತ್ತಾಗಿ ಅಗ್ನಿಗೆ ಪೂರ್ವಾಭಿಮುಖವಾಗಿ ನಮ್ಮ ನಮ್ಮ ಆಸನಗಳಲ್ಲಿ ಕುಳಿತೆವು. ಮಠದ ಸಂನ್ಯಾಸಿಗಳೆಲ್ಲರೂ ಒಬ್ಬೊಬ್ಬರಾಗಿ ಬಂದು ಸುತ್ತಲೂ ಕುಳಿತರು. ಪೂಜನೀಯ ಶಶಿ ಮಹಾರಾಜರು ಮೊದಲು ಅನುಷ್ಠಾನ ಮಾಡಬೇಕಾದ ಪೂಜೆ ಹಾಗೂ ಮಂತ್ರಾದಿಗಳನ್ನು ಉಚ್ಚರಿಸಿ ಹೋಮಾಗ್ನಿಯನ್ನು ಹೊತ್ತಿಸಿದರು. ಸ್ವಾಮೀಜಿಯವರು ವಿಶೇಷ ಆಸನದಲ್ಲಿ ಕುಳಿತು ಅರ್ಧ ನಿಮೀಲಿತ ಧ್ಯಾನ ನೇತ್ರದಿಂದ ನೋಡಲಾರಂಭಿಸಿದರು. ಸ್ವತಃ ಬೆಳಗುತ್ತಿದ್ದ ಅವರ ಮುಖಮಂಡಲವು ಹೋಮಾಗ್ನಿಯ ಉಜ್ವಲ ಪ್ರಭೆಯಲ್ಲಿ ಅಪೂರ್ವ ತೇಜಸ್ಸಿನಿಂದ ಪ್ರಕಾಶಿಸಿತು, ಸಾಕ್ಷಾತ್ ಅಗ್ನಿದೇವನೇ ನರರೂಪತಾಳಿ ಕುಳಿತಿರುವನೋ ಎಂಬಂತೆ!

''ಆ ಮುಹೂರ್ತದ ಮಾನಸಿಕ ಭಾವನೆಯು ಅವರ್ಣನೀಯ. ಮಂತ್ರದ ಪ್ರತಿಯೊಂದು ಅಕ್ಷರವೂ ಸಜೀವಗೊಂಡಂತೆ, ಪ್ರತಿಯೊಂದು ಪ್ರಾರ್ಥನೆಯೂ ಜ್ವಲಂತಗೊಂಡಂತೆ, ಎಲ್ಲ ಪ್ರತಿಬಂಧಕಗಳೂ, ಪಾಪಗಳೂ ಹಾಗೂ ಅವುಗಳಿಗೆ ಕಾರಣವಾದ ರಜಸ್ತಮಗಳು ಶುದ್ಧ ಸತ್ತ್ವದಲ್ಲಿ ಪರ್ಯವಸಾನವಾದಂತೆ, ಸಾಂಸಾರಿಕ ಸಂಬಂಧಗಳೂ, ವಿಷಯವಾಸನೆಗಳೂ, ಮನಸ್ಸಿನ ಸರ್ವ ಮಲಿನತೆಗಳೂ ಅಗ್ನಿಯಲ್ಲಿ ಭಸ್ಮೀಭೂತವಾಗುತ್ತಿರುವಂತೆ ಹಾಗೂ ನಾನು ಜ್ಯೋತಿಃಸ್ವರೂಪನಾದ ಪರಬ್ರಹ್ಮನ ಪದವನ್ನು ಗಳಿಸಲು ನನ್ನ ಮನ, ಪ್ರಾಣ, ಆತ್ಮ ಎಲ್ಲವನ್ನೂ ಆಹುತಿ ನೀಡುತ್ತಿರುವಂತೆ ಭಾಸವಾಯಿತು...

''ಸ್ವಾಮೀಜಿಯವರು ಸಂನ್ಯಾಸ ಪ್ರಾಪ್ತವಾದ ಈ ನವ ದೇಹಕ್ಕೆ 'ಸ್ವಾಮಿ ವಿರಜಾನಂದ'ನೆಂದೂ, ಚಟರ್ಜಿ ಮಹಾಶಯರಿಗೆ 'ನಿತ್ಯಾನಂದ'ನೆಂದೂ, ಕನ್ವಾಯ್‌ಗೆ 'ನಿರ್ಭಯಾನಂದ'ನೆಂದೂ, ಸುಶೀಲ್‌ಗೆ 'ಪ್ರಕಾಶಾನಂದ'ನೆಂದೂ ಹೆಸರಿಟ್ಟರು. ನಾವು ದೇವರ ಮನೆಯಲ್ಲಿ ಪ್ರಣಾಮ ಸಲ್ಲಿಸಿ, ಭಗವಂತನ ಕೃಪೆಗಾಗಿ ಪ್ರಾರ್ಥಿಸಿ, ಮಠದ ಪ್ರತಿಯೊಬ್ಬ ಸಂನ್ಯಾಸಿಗೂ ಸಾಷ್ಟಾಂಗ ಪ್ರಣಾಮ ಮಾಡಿ, ಅವರ ಆಶೀರ್ವಾದವನ್ನು ಬೇಡಿದೆವು. ಮೂರು ದಿನ ಗೃಹಸ್ಥರ ಮನೆಯಿಂದ ಮಧುಕರಿ ಮಾಡಿ, ಗುರುವಿಗೆ ನಿವೇದಿಸಿ, ನಂತರ ಆ ಪ್ರಸಾದವನ್ನು ತಿನ್ನಬೇಕೆಂಬ ನಿಯಮವನ್ನು ಯಥಾರೀತಿ ಪಾಲಿಸಿದೆವು. ನಮಗೆ ಸಂನ್ಯಾಸವನ್ನು ದಯಪಾಲಿಸಿದ ಸ್ವಾಮೀಜಿಯವರಿಗೆ ಅಂದು ಅದೆಷ್ಟು ಆನಂದ! ಗೃಹಸ್ಥನಿಗೆ ಪುತ್ರಸಂತಾನವಾದಾಗಲೂ ಅಷ್ಟು ಆನಂದವಾಗದೇನೋ!''

ಕೆಲವು ದಿನಗಳ ನಂತರ ಗೋಪಾಲೇರ್ ಮಾ ಮಠಕ್ಕೆ ಬಂದಿದ್ದರು. ಹೊಸ ಸಂನ್ಯಾಸಿಗಳನ್ನು ಕಂಡು ತುಂಬ ಆನಂದವನ್ನು ವ್ಯಕ್ತಪಡಿಸಿದರು. ಕಾಳೀಕೃಷ್ಣರ ಹೆಸರು ಸ್ವಾಮಿ ವಿರಜಾನಂದ ಎಂದು ಕೇಳಿ, ''ಆಹಾ, ಒಳ್ಳೇ ಹೆಸರೇ ಇಟ್ಟಿದ್ದಾರೆ, ಸರಿಯಾದ ಹೆಸರೇ ಇಟ್ಟಿದ್ದಾರೆ — ಬಿರಜಾನಂದ — ಬೇಜಾರೇ ಇಲ್ಲ (ಕಿರಿಕಿರಿ ಎಂಬುದಿಲ್ಲ)'' ಎಂದಿದ್ದರು. ಕಾಳೀಕೃಷ್ಣನ ನಿರುದ್ವಿಗ್ನ ಶಾಂತ ಸ್ವಭಾವವನ್ನು ಗುರುತಿಸಿಯೇ ಗೋಪಾಲೇರ್ ಮಾ ಆ ಮಾತನ್ನು ಹೇಳಿದ್ದರು.

---

[*] ಈ ದಿನ ಸ್ವಾಮೀಜಿಯವರು ಆಡಿದ ವಿಸ್ತಾರವೂ ಸ್ಫೂರ್ತಿದಾಯಕವೂ ಆದ ಮಾತುಕತೆಗಳು ಶ್ರೀ ಶರಚ್ಚಂದ್ರ ಚಕ್ರವರ್ತಿಯವರು ಬರೆದ 'ಸ್ವಾಮಿ ವಿವೇಕಾನಂದರ ಸಂಭಾಷಣೆಗಳು' ಎಂಬ ಪುಸ್ತಕದ ೧ನೇ ಭಾಗದ ೧೧ನೇ ಅಧ್ಯಾಯದಲ್ಲಿವೆ. *(ಈ ಗ್ರಂಥದಲ್ಲಿ ಪು.೮೫; ಹಾಗೂ ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೮, ಪು ೭೩)*

* * *

ಸ್ವಾಮೀಜಿಯವರು ಭಾರತಕ್ಕೆ ಹಿಂತಿರುಗಿ ಬರುವಾಗಲೇ ಮಠದ ಆದರ್ಶ ಮತ್ತು ಜೀವನಧಾರೆಯಲ್ಲಿ ಒಂದು ಕ್ರಾಂತಿಯನ್ನು ಹೊತ್ತು ತಂದಿದ್ದರು. ''ಸಂನ್ಯಾಸಿಗಳು ಕೇವಲ 'ಆತ್ಮನೋ ಮೋಕ್ಷಾರ್ಥಂ' ಅನ್ನು ಸಾಧಿಸಬಾರದು, 'ಜಗದ್ಧಿತಾಯ' (ಜಗತ್ತಿನ ಹಿತಕ್ಕಾಗಿ) ಪ್ರಚಂಡ ನಿಃಸ್ವಾರ್ಥ ಕರ್ಮಕ್ಕೂ ಇಳಿಯಬೇಕು. ಮುಂದಿನ ಐವತ್ತು ವರ್ಷಗಳವರೆಗೆ ಮಾತೃಭೂಮಿಯ ಪೂಜಾ ಪ್ರವರ್ತನೆಯನ್ನೂ, ಪ್ರಚಾರವನ್ನೂ ಮಾಡಬೇಕು'' ಎಂದು ಆದೇಶಿಸುತ್ತಿದ್ದರು. ಈ ಹೊಸ ವಿಚಾರದಿಂದಾಗಿ ಮಠದ ಸಂನ್ಯಾಸಿಗಳ ಮನಸ್ಸಿನಲ್ಲಿ ಸಂಶಯವು ತಲೆದೋರಿತು. ಅವರ ಪಾಲಿಗೆ ಇದು ಶ್ರೀರಾಮಕೃಷ್ಣರ ಹಾಗೂ ವಿವೇಕಾನಂದ ತತ್ತ್ವಗಳ ಸಂಘರ್ಷಕ್ಕೆ ಎಡೆಮಾಡಿತ್ತು. ತಪಸ್ಯೆ ಮತ್ತು ಕರ್ಮಗಳು ಬೆಳಕು-ಕತ್ತಲಿನಂತೆ ಪರಸ್ಪರ ವ್ಯತಿರಿಕ್ತ. ಗುರುಭ್ರಾತರು ಸ್ವಾಮೀಜಿಯವರೊಡನೆ ಈ ವಿಚಾರವಾಗಿ ಬಿಸಿ ಬಿಸಿ ಚರ್ಚೆಯಲ್ಲಿ ತೊಡಗುತ್ತಿದ್ದರು. ಶ್ರೀರಾಮಕೃಷ್ಣರಲ್ಲಿ ಈವರೆಗೆ ಇವರೆಲ್ಲ ಅವಲೋಕಿಸಿದ್ದು ಒಂದು ಮುಖ ಮಾತ್ರ. ಆದರೆ ಅವರು ವಾಸ್ತವದಲ್ಲಿ ಬೃಹತ್, ಅತಿ ಬೃಹತ್. ಅವರು ಕೇವಲ ಬಂಗಾಳದವರಲ್ಲ, ಕೇವಲ ಭಾರತದವರೂ ಅಲ್ಲ, ಇಡೀ ಜಗತ್ತಿಗೇ ಸೇರಿದವರು. ಸಮಗ್ರ ಜಗತ್ತಿನಲ್ಲಿ ಸತ್ಯ, ಶಾಂತಿ, ಮೈತ್ರಿಗಳನ್ನು ಸ್ಥಾಪನೆಗೊಳಿಸಲೆಂದೇ ಅವರ ಆವಿರ್ಭಾವವಾಗಿದೆ. ಇದರ ಅರಿವಾದಾಗ ಎಲ್ಲರೂ ಉತ್ಸಾಹದಿಂದ ಪುಳಕಿತರಾಗುತ್ತಿದ್ದರು. 'ಬಾಂದಾ ತಯ್ಯಾರ್' (ಸೇವಕ ಸಿದ್ಧ) ಎಂದು ನಾಯಕ ವಿವೇಕಾನಂದರ ಆದೇಶಗಳನ್ನು ಪರಿಪಾಲಿಸಲು ಟೊಂಕ ಕಟ್ಟಿ ನಿಲ್ಲುತ್ತಿದ್ದರು.

೧೮೯೭ರ ಮೇ ೧, ಅವಿಸ್ಮರಣೀಯ ದಿನ. ಸ್ವಾಮೀಜಿಯವರು ಕೊಲ್ಕತ್ತೆಯ ಬಾಘ್‌ಬಜಾರಿನಲ್ಲಿರುವ, ರಾಮಕೃಷ್ಣರ ಸಂಸರ್ಗದಿಂದ ಪುನೀತವಾದ ಬಲರಾಮನ ಬಸುವಿನ ಮನೆಗೆ ರಾಮಕೃಷ್ಣ ಸಮುದಾಯದ ಗೃಹಸ್ಥ ಮತ್ತು ಸಂನ್ಯಾಸೀ ಶಿಷ್ಯರನ್ನು ಆಹ್ವಾನಿಸಿ ಒಂದು ಸಂಘವನ್ನು ಸ್ಥಾಪಿಸುವ ಪ್ರಸ್ತಾಪವನ್ನು ಮುಂದಿಟ್ಟರು. ಅವರ ಅವಿಸ್ಮರಣೀಯ ಮಾತುಗಳಿವು :

''ನಾವು ಯಾರ ಹೆಸರಿನಲ್ಲಿ ಸಂನ್ಯಾಸಿಗಳಾದೆವೋ, ನೀವೆಲ್ಲ ಯಾರನ್ನು ಆದರ್ಶವನ್ನಾಗಿಟ್ಟುಕೊಂಡು ಗೃಹಸ್ಥಾಶ್ರಮದಲ್ಲಿದ್ದೀರೋ, ಯಾರ ದೇಹಾವಸಾನದ ಹತ್ತು ವರ್ಷದೊಳಗೆ ಪ್ರಾಚ್ಯ ಮತ್ತು ಪಾಶ್ಚಾತ್ಯ ಜಗತ್ತಿನಲ್ಲಿ ಅವರ ಪುಣ್ಯನಾಮ ಮತ್ತು ಅದ್ಭುತ ಜೀವನವು ಆಶ್ಚರ್ಯಕರವಾದ ರೀತಿಯಲ್ಲಿ ಪ್ರಸಾರವಾಗಿದೆಯೋ ಅವರ (ಶ್ರೀರಾಮಕೃಷ್ಣರ) ಹೆಸರಿನಲ್ಲೇ ಈ ಸಂಘವು ಸ್ಥಾಪನೆಯಾಗುತ್ತದೆ. ನಾವೆಲ್ಲರೂ ಪ್ರಭುವಿನ ದಾಸರು. ಆದ್ದರಿಂದ ನೀವು ಈ ಪವಿತ್ರ ಕಾರ್ಯದಲ್ಲಿ ಸಹಕರಿಸಿ.''

ಹೀಗೆ ರಾಮಕೃಷ್ಣ ಮಿಷನ್ ಸ್ಥಾಪನೆಯಾಯಿತು. ಜನರ ಲೌಕಿಕ ಮತ್ತು ಆಧ್ಯಾತ್ಮಿಕ ಸೇವೆ, ಶಿಕ್ಷಣ; ಶ್ರೀರಾಮಕೃಷ್ಣರ ಜೀವನದಲ್ಲಿ ವ್ಯಕ್ತವಾದಂತಹ ವೇದಾಂತ ಹಾಗೂ ಇತರ ಧಾರ್ಮಿಕ ಭಾವನೆಗಳ ಪರಿಪಾಲನೆ; ಮತ್ತು ಅವುಗಳ ಪ್ರಚಾರ – ಈ ಮೂರು ಮುಖ್ಯ ಉದ್ದೇಶಗಳು ವಿವಿಧ ಶಾಖೆ, ಉಪಶಾಖೆಗಳಲ್ಲಿ ಚಿಗುರಿ ಕಾರ್ಯಗತವಾಗತೊಡಗಿದವು. ಸ್ವಾಮೀಜಿಯವರ ಗುರುಭ್ರಾತರು ಮತ್ತು ಹೊಸದಾಗಿ ಸೇರುತ್ತಿದ್ದ ಯುವ ಸಂನ್ಯಾಸಿ, ಬ್ರಹ್ಮಚಾರಿಗಳು ಮೇಲಿನ ಉದ್ದೇಶ ಸಿದ್ಧಿಗಾಗಿ ತಮ್ಮನ್ನು ತಾವೇ ಕಾಯಾ-ವಾಚಾ-ಮನಸಾ ಸಮರ್ಪಿಸಿಕೊಂಡರು. ಹನ್ನೊಂದು ವರ್ಷಗಳ ಕಾಲ ಮಠದ ಎಲ್ಲೆಕಟ್ಟಿನ ಹೊರಗೆ ಹೋಗದೆ, ಏಕನಿಷ್ಠೆಯಿಂದ ಶ್ರೀರಾಮಕೃಷ್ಣರ ಸೇವೆ, ಪೂಜೆಯಲ್ಲೇ ನಿರತರಾಗಿದ್ದ ಸ್ವಾಮಿ ರಾಮಕೃಷ್ಣಾನಂದರು ಸ್ವಾಮೀಜಿಯವರ ಆದೇಶದ ಮೇರೆಗೆ ದಕ್ಷಿಣ ಭಾರತದಲ್ಲಿ ವೇದಾಂತ ಪ್ರಚಾರ ಮಾಡುವ ಉದ್ದೇಶದಿಂದ ಮಠವೊಂದನ್ನು ಸ್ಥಾಪಿಸಲು ಮದ್ರಾಸಿಗೆ (ಚೆನ್ನೈಗೆ) ಹೊರಟರು. ಸ್ವಾಮಿ ಅಖಂಡಾನಂದರು ಮುರ್ಶಿದಾಬಾದ್ ಜಿಲ್ಲೆಯ ದುರ್ಭಿಕ್ಷ ಪೀಡಿತ ಗ್ರಾಮಗಳಲ್ಲಿ ಪರಿಹಾರ ಕಾರ್ಯ ಕೈಗೊಳ್ಳಲು ಹೋದರು. ಸ್ವಾಮಿ ತ್ರಿಗುಣಾತೀತರೂ ಸಹ ಪರಿಹಾರಕಾರ್ಯಕ್ಕಾಗಿ ದಿನಾಜ್‌ಪುರಕ್ಕೆ ಹೋದರು. *(ಮುಂದುವರಿಯುವುದು)*

## ಸತ್ಯ ಮತ್ತು ವಿವೇಕ

ಒಬ್ಬನಿಗೆ ಅಣಕುವಿದ್ಯೆ ಚೆನ್ನಾಗಿ ಬರುತ್ತಿತ್ತು. ಹುಲಿ, ಕರಡಿ, ಸಿಂಹ, ನರಿ ಮೊದಲಾದ ಪ್ರಾಣಿಗಳ ಕೂಗನ್ನು ಅನುಕರಿಸಿ ಜನರನ್ನು ಅವನು ರಂಜಿಸುತ್ತಿದ್ದ. ಒಮ್ಮೆ ಆತ ಆಡಿನ ಮರಿಯಂತೆ ಅರಚಿ ತೋರಿಸಿದ. ಜನ ಆನಂದಗೊಂಡರು. ಅಲ್ಲೊಬ್ಬ ರೈತನಿದ್ದ. ಅವನು ಹೇಳಿದ, ''ನೀನು ಈಗ ಕೂಗಿದ್ದು ಸರಿಯಾಗಿಲ್ಲ.'' ಜನರೆಲ್ಲ ಅವನಿಗೆ ಹೇಳಿದರು, ''ಹಾಗಾದರೆ ನೀನೇ ಕೂಗಿ ತೋರಿಸು.'' ಆ ರೈತ ವೇದಿಕೆಗೆ ಹೋಗಿ ಆಡಿನಂತೆ ಕೂಗಿದ. ಜನ ಗೇಲಿ ಮಾಡುತ್ತ, ''ನೀನು ಕೂಗಿದ ರೀತಿಯೇ ಸರಿಯಾಗಿಲ್ಲ. ಅವನನ್ನು ಬೇರೆ ಹಂಗಿಸುತ್ತೀಯಲ್ಲ?'' ಎಂದರು.

ರೈತ ತನ್ನ ಕಂಬಳಿಯಲ್ಲಿ ಅಡಗಿಸಿಟ್ಟುಕೊಂಡಿದ್ದ ಆಡನ್ನು ಜನರಿಗೆ ತೋರಿಸಿ, ''ಭಾರಿ ಬುದ್ಧಿವಂತರು ನೀವು! ನಿಜವಾದ ಆಡಿನ ಮರಿಯ ಕೂಗನ್ನೇ ನಾನು ನಿಮಗೆ ಕೇಳಿಸಿದ್ದೆ. ಇಲ್ಲಿ ನೋಡಿ ಬೇಕಾದರೆ'' ಎಂದು ಮತ್ತೊಮ್ಮೆ ಅದರ ಕೂಗನ್ನು ಕೇಳಿಸಿದ. ಜನ ಪೆಚ್ಚಾದರು. ''ನಿಮಗೆ ನಿಜವಾದ ಆಡಿನ ಮರಿಯ ಕೂಗು ಕೇಳಿಸಿದರೂ ಸರಿಯಿಲ್ಲ ಅನ್ನುತ್ತೀರಿ. ಏನೋ ಒಂದು ರೀತಿ ಸುಳ್ಳು ಅಣಕ ಮಾಡಿ ಅರಚಿದರೆ 'ಹೋ ಹೋ' ಎಂದು ಆನಂದಪಡುತ್ತೀರಿ'' ಎಂದು ರೈತ ಜನರನ್ನು ಮೂದಲಿಸಿ ಅಲ್ಲಿಂದ ಹೊರಟುಹೋದ.

ಹಲವು ವೇಳೆ ಜನ ಸತ್ಯವನ್ನೇ ಸುಳ್ಳು ಮಾಡುತ್ತಾರೆ; ಸುಳ್ಳನ್ನೇ ಸತ್ಯ ಮಾಡುತ್ತಾರೆ. ವಿವೇಕಿಗೆ ಅದೆಲ್ಲವೂ ಅರ್ಥವಾಗುತ್ತದೆ.

*(ಪ್ರ. ಗ. ಸಹಸ್ರಬುದ್ಧೆಯವರ 'ಜೀವನಮೌಲ್ಯಗಳು' (೨) ಗ್ರಂಥದಿಂದ)*

# ಶ್ರೀಮಾತೆಯವರ ಪತ್ರಗಳು – ೬

ಅನುವಾದ: **ಪ್ರವ್ರಾಜಿಕಾ ಧರ್ಮಪ್ರಾಣಾ**

### ಪತ್ರ-೨೨

ಶ್ರೀ ಶ್ರೀ ದುರ್ಗಾ ಕೃಪೆ

೬-೧೧-೧೯೦೬

ಚಿರಂಜೀವಿಗೆ ,

ಮತ್ತೆ ಪ್ರೀತಿಯ ಮಗೂ, ಅಂಚೆಯ ಮೂಲಕ ಬಂದ ನಿನ್ನ ಕ್ಷೇಮ ಸಮಾಚಾರಗಳ ಪತ್ರ ಸಿಕ್ಕಿ ಎಲ್ಲಿಲ್ಲದ ಸಂತೋಷವಾಯಿತು. ಮೀನು ತಿಂದಿರುವೆ ಎಂದು ಕೇಳಿ ಅತ್ಯಂತ ಸಂತೋಷವಾಯಿತು. ಮತ್ತೆ ವಸಂತನನ್ನು ಈಗ ಇಂಗ್ಲೆಂಡಿಗೆ ಕಳುಹಿಸುವ ಆಲೋಚನೆ ಇಲ್ಲ. ಕಾರಣ, ಈಗ ಜನರ ಕೊರತೆ ಇದೆ. ಸ್ವಲ್ಪ ದಿನಗಳ ನಂತರ ನೀವೆಲ್ಲ ಆಲೋಚಿಸಿ ನೋಡಿ, ಯಾವಾಗ ಸಾಧ್ಯವಾಗುವುದೆಂದು ಅನ್ನಿಸುವುದೋ ಆಗ ಕಳುಹಿಸು. ಇಲ್ಲಿ ಎಲ್ಲವೂ ಕುಶಲ. ನಿಮ್ಮೆಲ್ಲರ ಕ್ಷೇಮಸಮಾಚಾರವನ್ನು ಬರೆದು ತಿಳಿಸು.

ಇತಿ, ೨೦ ಕಾರ್ತಿಕ

***ಪತ್ರ ಪಡೆದವರ ಹೆಸರು ಮತ್ತು ವಿಳಾಸ***

*Swamy Ramakrishnananda*
*Castle Kernan, Triplicane*
*Ice House, Madras*

### ಪತ್ರ-೨೩

ಓಂ ರಾಮಕೃಷ್ಣ ಶರಣಂ

೨೭.೧.೧೯೦೭
ಜಯರಾಂಬಾಟಿ
ವರ್ಷ ೧೩೧೩, ೧೬ ಮಾಘ

ದೀರ್ಘಾಯುವಾಗು.

ಪರಮ ಶುಭಾಶೀರ್ವಾದ. ವಿಶೇಷವೇನೆಂದರೆ

ನಿನ್ನ ಒಂದು ಪತ್ರ ಸಿಕ್ಕಿ ಸಮಾಚಾರಗಳನ್ನೆಲ್ಲ ತಿಳಿದುಕೊಂಡೆ. ಮತ್ತೆ ಈಗ ಮಗೂ, ನಾನು ಒಂದು ದೊಡ್ಡ ಆಪತ್ತಿಗೆ ಸಿಕ್ಕಿ ಹಾಕಿಕೊಂಡಿದ್ದೇನೆ. ಚಿಕ್ಕ ಸೊಸೆ ತವರುಮನೆಗೆ ಹೋಗಿದ್ದಳು. ಅಲ್ಲಿ ಅವಳ ಮಲತಾಯಿಯ ಜೊತೆ ಜಗಳ ಮಾಡಿ ಮನೆಗೆ ಮರಳುತ್ತಿದ್ದಳು. ಆದರೆ ಅವಳ ತಂದೆ ಅವಳನ್ನು ಹಿಡಿದು ಅವಳಿಗೆ ಹೊಡೆದು, ಬಡಿದು ಮಾಡಿ ಆಭರಣದ ಪೆಟ್ಟಿಗೆಯನ್ನು ಕಸಿದುಕೊಂಡಿದ್ದಾರೆ. ಆಭರಣದ ಬೆಲೆ ಸುಮಾರು ೫೦೦ ರೂಪಾಯಿ ಆಗುತ್ತದೆ. ಏನೇ ಮಾಡಿದರೂ ಆಭರಣ ಮತ್ತೆ ಕೊಡಲು ಒಪ್ಪುತ್ತಿಲ್ಲ. ಅವರು ಹೇಳುತ್ತಿದ್ದಾರೆ, 'ಆಭರಣವನ್ನು ಯಾರಿಗೆ ಕೊಡಲಿ? ನನ್ನ ಮಗಳು ಹುಚ್ಚಿ, ಮಗಳಿಗೆ ವಾಸಿಯಾಗ ದಿದ್ದರೆ ಆಭರಣ ಕೊಡುವುದಿಲ್ಲ' ಎಂದು. ಈ ಸೊಸೆಯಂತೂ ವಿಪರೀತ ಅತ್ತು ರಂಪಾಟ ಮಾಡುತ್ತಿದ್ದಾಳೆ. ನನಗಂತೂ ಏನು ಉಪಾಯ ಮಾಡಬೇಕೆಂದೇ ನಿಶ್ಚಯಿಸಲಾಗುತ್ತಿಲ್ಲ. ದೂರು ನೀಡೋಣ ಎಂದರೆ ಅದಕ್ಕೂ ಉಪಾಯವಿಲ್ಲ. ಕಾರಣ, ಈ ಹುಚ್ಚಿ ಏನು ಹೇಳಲು ಹೋಗಿ ಇನ್ನೇನು ಹೇಳುವಳೋ! ಇತಿ ಇಲ್ಲಿಯ ಸಮಾಚಾರ. ನಾನು ಚೆನ್ನಾಗಿದ್ದೇನೆ. ನಿನ್ನ ಕಲ್ಯಾಣಕ್ಕಾಗಿ ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

ಜಯರಾಂಬಾಟಿ, ೧೬ನೇ ಮಾಘ

ಆಶೀರ್ವಾದದೊಂದಿಗೆ ನಿನ್ನ ತಾಯಿ

ಜಯರಾಂಬಾಟಿ

***ಪತ್ರ ಪಡೆದವರ ಹೆಸರು***

*ಸ್ವಾಮಿ ರಾಮಕೃಷ್ಣಾನಂದ (ಇರಬಹುದು)*

ಶ್ರೀಮಾತೆಯವರ ಚಿಕ್ಕ ಸಹೋದರನ ಪತ್ನಿ ಸುರಬಾಲಾಳನ್ನು 'ಚಿಕ್ಕ ಸೊಸೆ' ಎಂದು ಕರೆಯುತ್ತಿದ್ದರು. ಭಕ್ತವೃಂದದವರಿಗೆ ಇವಳು 'ಪಾಗ್ಲಿ ಮಾಮಿ' (ಹುಚ್ಚಿ ಅತ್ತೆ ) ಎಂಬ ಹೆಸರಿನಿಂದಲೇ ಪರಿಚಿತಳು. ಇವಳೇ ರಾಧುವಿನ ತಾಯಿ.

### ಪತ್ರ - ೨೪

ಓಂ ರಾಮಕೃಷ್ಣ ಜಯತಿ

೨೫. ೨. ೧೯೦೭
ತಾರೀಖು ೧೩ನೇ ಫಾಲ್ಗುಣ, ಸೋಮವಾರ

ಪ್ರೀತಿಯ ಮಗೂ,

ನಿನ್ನೆ ನಿನ್ನ ಒಂದು ಪತ್ರದಲ್ಲಿ ನೋಡಿದೆ, ಏನೆಂದರೆ ನೀನು ನನಗಾಗಿ ಒಂದು ಜೋಡಿ ಸೀರೆ ಕಳುಹಿಸಿರುವೆ ಎಂದು. ಆದರೆ ಆ ಸೀರೆಯನ್ನು ಇಂದು ರಾಮಲಾಲನಿಂದ ಪಡೆದೆ. ಸಿಕ್ಕಿ ಪರಮ ಆನಂದಿತಳಾದೆ. ಸೀರೆ ತುಂಬಾ ಚೆನ್ನಾಗಿದೆ. ಶ್ರೀ ಠಾಕೂರರ ಉತ್ಸವದಂದು ನೀನು ನಿನ್ನ ಮಿತ್ರವೃಂದದವರನ್ನು ಸೇರಿಸಿ ಯಾವ ಕಾರ್ಯಗಳನ್ನು ನಡೆಸಿದ್ದೆಯೋ ಅದನ್ನು ಕೇಳಿ ತೃಪ್ತಿ ಹೊಂದಿದೆ. ಮತ್ತು ನಿನ್ನ ಮಿತ್ರವೃಂದಕ್ಕೆ ನನ್ನ ಆಶೀರ್ವಾದ ತಿಳಿಸು. ಇದರಿಂದ ಅವರಿಗೆ ಠಾಕೂರರಲ್ಲಿ ಭಕ್ತಿ ಉಂಟಾಗಲಿ. ಅಲ್ಲದೆ ಮಗೂ, ನೀನು

ತುಂಬಾ ಹುಷಾರಾಗಿರು ಮತ್ತು ಯಾವಾಗಲೂ ನಿನ್ನ ಮಿತ್ರ ವೃಂದದೊಂದಿಗೆ ಆನಂದಿಸು. ನಿನಗೆ ನನ್ನ ಆಶೀರ್ವಾದ.

ಇತೀ ನಿನ್ನ ಶುಭಾಕಾಂಕ್ಷಿ, ತಾಯಿ

ನಾನು ಕೊಲ್ಕತ್ತಾಕ್ಕೆ ಹೋಗುವುದು ಯಾವಾಗ ಎಂದು ನಿಶ್ಚಯವಾಗಿಲ್ಲ.

ಸದ್ಯ ಚೆನ್ನಾಗಿದ್ದೇನೆ, ಮತ್ತು ಮನೆಯವರೆಲ್ಲಾ ಚೆನ್ನಾಗಿದ್ದಾರೆ.

ಇತಿ,

(ನಿನ್ನ ತಾಯಿ)

*ಪತ್ರ ಪಡೆದವರ ಹೆಸರು ಮತ್ತು ವಿಳಾಸ*
*Swami Ramakrishnananda*
*Castle Kernan (Old Ice House)*
*Triplicane , Madras*

## ಪತ್ರ - ೨೫

ಓಂ ರಾಮಕೃಷ್ಣರ ಕೃಪೆ

೧೦.೩.೧೯೦೭

ಪರಮ ಶುಭಾಶೀರ್ವಾದ ಮೊದಲು ತಿಳಿಸಿ,

ವಿಶೇಷವೇನೆಂದರೆ

ಪ್ರೀತಿಯ ಮಗೂ, ನಿನ್ನ ಪತ್ರ ಸಿಕ್ಕಿ ನಾನು ಎಲ್ಲಿಲ್ಲದಷ್ಟು ಸಂತೋಷಗೊಂಡೆ. ಮಠದ ಸಮಾಚಾರಗಳನ್ನು ಬರೆದಿರುವೆ. ಇದರಿಂದ ಪರಮ ತೃಪ್ತಿಯನ್ನು ಹೊಂದಿದೆ. ಭಗವಂತನು ನಿನಗೆ ಅತ್ಯಂತ ಭಕ್ತಿಯನ್ನು ನೀಡಲಿ. ಇದನ್ನೇ ನಾನು ಪ್ರಾರ್ಥಿಸುತ್ತಿದ್ದೇನೆ. ಆದರೆ ಮಗೂ, ನಾನು ದೊಡ್ಡ ವಿಪತ್ತಿಗೆ ಬಿದ್ದಿದ್ದೇನೆ. ನಮ್ಮ ದೊಡ್ಡ ಸೊಸೆ ೨೨ನೇ ಫಾಲ್ಗುಣ ದಿವಸದಂದು ಬೆಳಿಗ್ಗೆ ಸ್ನಾನ, ಆಹಾರ ಮುಗಿಸಿದ ಮೇಲೆ ಹಠಾತ್ತಾಗಿ ಹೊಟ್ಟೆಯಲ್ಲಿ ಒಂದು ನೋವು. ಮತ್ತು ೨, ೪ ಸಲ ವಾಂತಿ, ಭೇದಿ ಮಾಡಿ ರಾತ್ರಿ ೯ಗಂಟೆಗೆ ಸತ್ತು ಹೋದಳು. ಇದರಿಂದ ನನ್ನ ಮನಸ್ಸಿಗೆ ಅತ್ಯಂತ ದು:ಖವಾಗಿದೆ. ಸದ್ಯ ಮನೆಯಲ್ಲಿ (ಎಲ್ಲರೂ) ಒಂದು ರೀತಿ ಚೆನ್ನಾಗಿದ್ದಾರೆ. ನಿನಗೆ ನನ್ನ ಆಶೀರ್ವಾದ ಮತ್ತು ಎಲ್ಲರಿಗೂ ಆಶೀರ್ವಾದ ತಿಳಿಸು.

ಇತಿ ,

೧೩೧೩ ವರ್ಷ , ತಾರೀಖು ೨೬ನೇ ಫಾಲ್ಗುಣ

ನಿನ್ನ ಸ್ನೇಹಮಯಿ ಮಾತೆ

*ಪತ್ರ ಪಡೆದವರ ಹೆಸರು ಮತ್ತು ವಿಳಾಸ*
*The Swami Ramakrishnanandaji*
*The Castle Kernan (Old Ice House )*
*Triplicane, Madras*

ದೊಡ್ಡ ಸೊಸೆ ಎಂದರೆ ಶ್ರೀಮಾತೆಯವರ ಹಿರಿಯ ಸಹೋದರ ಪ್ರಸನ್ನಕುಮಾರನ ಪತ್ನಿ.

## ಪತ್ರ -೨೬

ಶ್ರೀ ಶ್ರೀ ಕಾಳಿ

Postal Date

೧೯.೭.೧೯೦೭

ಚಿರಂಜೀವಿಗೆ,

ಪ್ರೀತಿಯ ಮಗೂ, ಈಗ ನೀನು ಕಳುಹಿಸಿರುವ ೮ ರೂಪಾಯಿ ಸಿಕ್ಕಿತು. ಮತ್ತು ನೀನು ನಂದನ ಸಹೋದರ ಪುತ್ರನಿಗಾಗಿ ತುಂಬಾ ಚಿಂತೆಯನ್ನೇನೂ ಮಾಡುವುದು ಬೇಡ. ಕಾರಣ, ನೀನು ಸುಶಿಕ್ಷಿತ ನಾಗಿರುವೆ. ಎಲ್ಲವೂ ಈಶ್ವರನ ಇಚ್ಛೆ. ಕೇಳಿದೆ, ನೀನು ಬರೀ ಚಪಾತಿ ಇತ್ಯಾದಿ ಮಾತ್ರ ಆಹಾರ ತೆಗೆದುಕೊಳ್ಳುತ್ತಿರುವೆ ಎಂದು. ಇದರಿಂದ ನಿನ್ನ ಶರೀರ ಅತ್ಯಂತ ದುರ್ಬಲವಾಗುವುದು. ನಾನು ಹೇಳಿದಂತೆ ಹಿಂದಿನ ತರಹವೇ ಆಹಾರಾದಿ ಸೇವಿಸಬೇಕು. ನಾನು ಕೊಲ್ಕತ್ತಾಕ್ಕೆ ಹೋದರೆ ಯಾರ ಬಳಿ ಇರಲಿ? ನೀನು ಮಾತ್ರ ನನಗಿರುವುದು. ಮತ್ತು ಚಾರುವಿನ ಅಸೌಖ್ಯದ ಬಗ್ಗೆ ಕೇಳಿ ಮನಸ್ಸಿನಲ್ಲಿ ಕಷ್ಟದಿಂದಿದ್ದೇನೆ. ಚಾರುವಿನ ಸೌಖ್ಯದ ಸಮಾಚಾರ ನೀಡಿ ನೆಮ್ಮದಿಯನ್ನು ಕೊಡಬೇಕು. ಇಲ್ಲಿ ಎಲ್ಲವೂ ಕ್ಷೇಮ. ನಿಮ್ಮೆಲ್ಲರ ಕ್ಷೇಮದ ಸಮಾಚಾರವನ್ನು ಬರೆದು ತಿಳಿಸು.

ಆಶೀರ್ವಾದದೊಂದಿಗೆ

ಶ್ರೀಮಾತೆ

*ಪತ್ರ ಪಡೆದವರ ಹೆಸರು*
*ಮಹೇಂದ್ರನಾಥ ಗುಪ್ತ*

## ಪತ್ರ -೨೭

ಶ್ರೀ ಶ್ರೀ ಗುರುದೇವರ
ಶ್ರೀ ಶ್ರೀ ಚರಣ ಕೃಪೆ

೧೯.೧೧.೧೯೦೭

ಜಯರಾಂಬಾಟಿ, ೩ನೇ ಅಗ್ರಹಾಯಣ

ಪ್ರೀತಿಯ ಮಗೂ,

ನಿನ್ನ ಪತ್ರದಲ್ಲಿ ಶ್ರೀ ಶ್ರೀ ಠಾಕೂರರ ಹೆಸರಿನಲ್ಲಿ ಅಲ್ಲಿ ಮಠ ಆರಂಭವಾಗಿದೆ ಎಂದು ತಿಳಿದು ಅತ್ಯಂತ ಆನಂದಿತಳಾದೆ. ಅಲ್ಲಿ ಅವರ ಕೆಲಸ ಚೆನ್ನಾಗಿ ನಡೆಯಲೆಂದು ಅವರ ಬಳಿ ಪ್ರಾರ್ಥಿಸುತ್ತಿದ್ದೇನೆ. ಇಲ್ಲಿ ಎಲ್ಲವೂ ಕ್ಷೇಮ. ಇಲ್ಲಿ ಜಗದ್ಧಾತ್ರೀ ಪೂಜೆ ಮನೋಹರವಾಗಿ ನಡೆಯಿತು. ಕೃಷ್ಣಲಾಲ್, ಆಶು ಮತ್ತು ಗಣೇನ್ ಇಲ್ಲಿದ್ದಾರೆ. ನನ್ನ ಆರೋಗ್ಯಕ್ಕೆ ಕೊರತೆ ಇಲ್ಲ. ನೀವೆಲ್ಲರೂ ಚೆನ್ನಾಗಿದ್ದೀರೆಂದು ಆಶಿಸುತ್ತಿದ್ದೇನೆ. ನಿನಗೆ ಆಶೀರ್ವಾದ.

ಇತಿ ನಿಮ್ಮೆಲ್ಲರ ತಾಯಿ

*ಪತ್ರ ಪಡೆದವರ ಹೆಸರು*
*ಸ್ವಾಮಿ ರಾಮಕೃಷ್ಣಾನಂದ (ಸಂಭವನೀಯ)*

---




# ದಿವ್ಯಸ್ಪರ್ಶದಿಂದ ಬೆಳಗಿದ ಬದುಕು

## (ಸ್ವಾಮಿ ವಿವೇಕಾನಂದರ ಸ್ನೇಹಿತ ಫ್ರಾನ್ಸಿಸ್ ಲೆಗೆಟ್‌ನ ಜೀವನ ಚರಿತ್ರೆ)




*ಕೃತಿ* : **ಸ್ವಾಮಿ ವಿವೇಕಾನಂದರ ವ್ಯಾಪಾರಿ ಗೆಳೆಯ**
(ಸ್ವಾಮಿ ವಿವೇಕಾನಂದರ ಜೀವನದ ಒಂದು ಸುಪ್ತ ಅಧ್ಯಾಯ)
*ಲೇಖಕರು* :
**ಸೋಮನಾಥ ಮುಖ್ಯೋಪಾಧ್ಯಾಯ**
*ಪ್ರಕಾಶಕರು* :
**ರಾಮಕೃಷ್ಣ ಸಾರದಾ ಮಿಷನ್**
**ದಕ್ಷಿಣೇಶ್ವರ, ಕೊಲ್ಕತ್ತಾ - 700076**
*ಪುಟಗಳು* : **200** *ಬೆಲೆ* : **25/**

ರಾಮಕೃಷ್ಣ ಶಾರದಾ ಮಿಷನ್ ಸ್ವಾಮಿ ವಿವೇಕಾನಂದರ ೧೫೦ನೇ ಜಯಂತಿಯ ಪ್ರಯುಕ್ತ ಪ್ರಕಟಿಸಿದ ವಿಶೇಷ ಪ್ರಕಟಣೆಯೇ **'ಸ್ವಾಮಿ ವಿವೇಕಾನಂದರ ವ್ಯಾಪಾರಿ ಗೆಳೆಯ'** ಗ್ರಂಥ. ಈ ಪುಸ್ತಕದ ಉಪಶೀರ್ಷಿಕೆ 'ಸ್ವಾಮಿ ವಿವೇಕಾನಂದರ ಜೀವನದ ಒಂದು ಸುಪ್ತ ಅಧ್ಯಾಯ' ಎಂದಿದೆ. ಅಮೆರಿಕದ ಪ್ರಭಾವಶಾಲಿ ವ್ಯಾಪಾರಿ ಫ್ರಾನ್ಸಿಸ್ ಲೆಗೆಟ್ ಅವರು ಸ್ವಾಮಿ ವಿವೇಕಾನಂದರ ಸಂಪರ್ಕಕ್ಕೆ ಬಂದ ಮೇಲೆ ಅವರ ಜೀವನದಲ್ಲೂ , ಅವರ ಕುಟುಂಬದ ಮೇಲೂ ಉಂಟಾದ ಬದಲಾವಣೆ, ಸ್ವಾಮೀಜಿ ತಮ್ಮ ಕಾರ್ಯಕ್ಕಾಗಿ ಲೆಗೆಟ್ ಹಾಗೂ ಅವರ ಸಂಬಂಧಿಕರಿಂದ ಪಡೆದ ಸಹಾಯ, ಮುಂದೆ ಈ ಕುಟುಂಬ ರಾಮಕೃಷ್ಣ ಮಿಷನ್ನಿನ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಮುಂದುವರಿದ ಬಗೆ — ಈ ಸಂಗತಿಗಳನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸಲಾಗಿದೆ. ಮೂಲ ಬಂಗಾಳಿಯಲ್ಲಿ ಸೋಮನಾಥ ಮುಖ್ಯೋಪಾಧ್ಯಾಯ ಅವರು ಬರೆದ ಗ್ರಂಥ ವನ್ನು ಶಾರದಾ ಮಠದ ಮಾತಾಜಿಯವರು ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಿದ್ದಾರೆ. ಹಲವು ಕುತೂಹಲಕಾರಿಯಾದ ಘಟನೆಗಳೊಂದಿಗೆ ಈ ಗ್ರಂಥವು ಫ್ರಾನ್ಸಿಸ್ ಲೆಗೆಟ್, ಬೆಟ್ಟಿ ಲೆಗೆಟ್, ಜೋಸೆಫಿನ್ ಮ್ಯಾಕ್‌ಲೌಡ್ ಇವರುಗಳ ವ್ಯಕ್ತಿತ್ವವನ್ನು ಚಿತ್ರಿಸುತ್ತ, ಸ್ವಾಮಿ ವಿವೇಕಾನಂದರ ದಿವ್ಯಸ್ಪರ್ಶದಿಂದ ಅವರ ಜೀವನ ಹೇಗೆ ಇನ್ನೊಂದು ದಿಕ್ಕಿಗೆ ಹರಿಯಿತು ಎಂಬುದನ್ನು ಅತ್ಯಂತ ರೋಚಕವಾಗಿ ವಿವರಿಸುತ್ತದೆ.

ಸ್ವಾಮಿ ವಿವೇಕಾನಂದರ ಜೀವನ ಚರಿತ್ರೆಗಳಲ್ಲಿ ಈ ವ್ಯಕ್ತಿತ್ವಗಳ ಉಲ್ಲೇಖ ಅಲ್ಲಲ್ಲಿ ಬರುತ್ತದೆ, ಪ್ರಾಸಂಗಿಕವಾಗಿ ನಡೆದ ಘಟನೆಗಳ ಒಂದು ಅಂಗವಾಗಿ ಅವರ ವಿಚಾರಗಳನ್ನು ಅಲ್ಲಿ ಹೇಳಲಾಗಿದೆ. ಆದರೆ ಅಲ್ಲೆಲ್ಲೂ ಈ ಕುಟುಂಬದ, ಈ ವ್ಯಕ್ತಿತ್ವಗಳ ಒಂದು ಪ್ರತ್ಯೇಕ ಚಿತ್ರಣವಿಲ್ಲ. ಸ್ವಾಮೀಜಿಯವರ ದೃಷ್ಟಿಕೋನದಿಂದ ಈ ವ್ಯಕ್ತಿಗಳನ್ನು ನೋಡುವ ಬದಲು, ಈ ಪಾಶ್ಚಾತ್ಯ ಸಜ್ಜನರ ದೃಷ್ಟಿಯಿಂದ ಸ್ವಾಮೀಜಿ ಹಾಗೂ ಭಾರತವನ್ನು ನೋಡುವ ವಿಶಿಷ್ಟ ನಿರೂಪಣಾಕ್ರಮ ಇಲ್ಲಿದೆ. ಹತ್ತು ಹಲವು ಆಕರಗಳಿಂದ ಸಂಗ್ರಹಿಸಿದ ಈ ಮಾಹಿತಿಗಳು ವಿವೇಕಾನಂದರ ಜೀವನ ಚಿತ್ರಣಕ್ಕೆ ಒಂದು ಹೊಸ ಶೋಭೆಯನ್ನು ನೀಡುತ್ತವೆ; ಅವರ ಜೀವನದ ಬಿರುಗಾಳಿಯಂಥ ಜೀವನಲೀಲೆಯಲ್ಲಿ ಎಂತೆಂತಹ ಪಾತ್ರಗಳು ಭಾಗವಹಿಸುತ್ತವೆ ಎಂಬುದನ್ನು ಸ್ಥೂಲವಾಗಿ ಚಿತ್ರಿಸುತ್ತವೆ. ಭಾರತೀಯ - ಪಾಶ್ಚಾತ್ಯ ಜೀವನ ಶೈಲಿ ಇನ್ನೂ ಪರಸ್ಪರ ಪರಿಚಯ ಮಾಡಿಕೊಳ್ಳದಿದ್ದ ಆ ಕಾಲದಲ್ಲಿ ಸ್ವಾಮಿ ವಿವೇಕಾನಂದರು ಅಮೆರಿಕದ ವ್ಯಾಪಾರಿಯೊಬ್ಬನ ಬದುಕಿನಲ್ಲಿ ಎಂತಹ ಪ್ರಭಾವವನ್ನು ಬೀರಿದರು ಎಂಬುದನ್ನು ಓದಿಯೇ ಅರಿತುಕೊಳ್ಳಬೇಕು. ಇಂತಹ ಒಂದು ಅಪೂರ್ವ ಕೃತಿಯನ್ನು ಸುಲಭ ಬೆಲೆಗೆ ಪ್ರಕಟಿಸಿದೆ ಶ್ರೀ ಶಾರದಾ ಮಿಷನ್.

ಈ ಕೃತಿಯ ನಿರೂಪಣೆಯನ್ನು ಕುರಿತು ಒಂದು ಮಾತು. ವ್ಯಕ್ತಿಗಳ ಪರಿಚಯ, ಘಟನೆಗಳ ವಿವರಣೆ, ಅವುಗಳಿಗೆ ಹಿನ್ನೆಲೆಯಾಗಿ ಆಗಿನ ಕಾಲದ ಹಿನ್ನೆಲೆ ಇವುಗಳನ್ನು ನೀಡುತ್ತ , ಅದಕ್ಕನುಗುಣವಾಗಿ ಕೃತಿಯ ಪ್ರಧಾನ ಪಾತ್ರವಾದ ಫ್ರಾನ್ಸಿಸ್ ಲೆಗೆಟ್ ವ್ಯಕ್ತಿತ್ವವನ್ನು ಓದುಗನ ಮುಂದೆ ಚಿತ್ರಿಸುವ ಶೈಲಿ ತುಂಬ ಸೊಗಸಾದದ್ದು. ಕಥನಶೈಲಿ ಎಲ್ಲೂ ಬೇಸರ ತರಿಸುವುದಿಲ್ಲ. ರಿಜಲಿ ಮ್ಯಾನರ್, ಸಹಸ್ರ ದ್ವೀಪೋದ್ಯಾನ ಮೊದಲಾದ ಸ್ಥಳಗಳ ವರ್ಣನೆಯು ಲೆಗೆಟ್ ಕುಟುಂಬ-ಸ್ವಾಮೀಜಿಯವರ ಒಡನಾಟದ ಚಿತ್ರವನ್ನು ಸಮರ್ಥವಾಗಿ ಕಣ್ಣಮುಂದೆ ತರುತ್ತದೆ. ನಡುನಡುವೆ ಹಾಸ್ಯಪೂರಿತವಾದ ಮಾತುಗಳು, ರಸವತ್ತಾದ ಘಟನೆಗಳು ಈ ಜೀವನಚಿತ್ರಕ್ಕೆ ಜೀವಂತಿಕೆ ನೀಡುತ್ತವೆ. ❁

# ತ್ಯಾಗಿ ವೀರ ಸಂತ ತೇಗ್ ಬಹದ್ದೂರ್

ಸ್ವಾಮಿ ವೀರೇಶಾನಂದ



ಸಿಖ್ ಧರ್ಮದ ಪುಣ್ಯಗ್ರಂಥ ಗುರು ಗ್ರಂಥ ಸಾಹಿಬ್. ಅದರಲ್ಲಿನ ಒಂದು ಪದ್ಯ ಹೀಗಿದೆ: ''ದುರದೃಷ್ಟಗಳಿಂದ ವಿಚಲಿತನಾಗದೆ ಇರಬೇಕು. ಸುಖಜೀವನ, ಆಸಕ್ತಿ ಮತ್ತು ಭಯಗಳ ನೆಲೆಯಿಂದ ಮೇಲೆ ಏರಬೇಕು. ಚಿನ್ನ ಮತ್ತು ಮಣ್ಣು ಧೂಳಿಗಳನ್ನು ಒಂದೇ ಎಂದು ಕಾಣಬೇಕು. ನಿಂದಾಸ್ತುತಿಗಳನ್ನು ಸಮಾನವಾಗಿ ನೋಡಬೇಕು. ಲೋಭ, ರಾಗದ್ವೇಷ ಮತ್ತು ಅಹಂಕಾರಗಳನ್ನು ತ್ಯಾಗ ಮಾಡಬೇಕು. ಸುಖೋನ್ಮಾದ ಮತ್ತು ದುಃಖದುಮ್ಮಾನಗಳ ನಡುವೆಯೂ ಉದಾಸೀನನಾಗಿ ಇರಬೇಕು. ಮಾನ ಅಪಮಾನಗಳಿಂದ ಪ್ರಭಾವಿತನಾಗಬಾರದು. ಎಲ್ಲ ರೀತಿಯ ಆಸೆ ಮತ್ತು ಅಪೇಕ್ಷೆಗಳನ್ನು ಬಿಟ್ಟುಬಿಡಬೇಕು. ಇಂದ್ರಿಯಗಳು ಮತ್ತು ಕ್ರೋಧ ನಮ್ಮನ್ನು ಸೆಳೆಯದಂತೆ ಎಚ್ಚರಿಕೆ ವಹಿಸಬೇಕು. ಇವುಗಳಲ್ಲಿ ಯಶಸ್ವಿಯಾದ ಸಾಧಕನ ಅಂತರಂಗದಲ್ಲಿ ಭಗವಂತನೇ ನೆಲೆಸುತ್ತಾನೆ. ಗುರುವಿನ ಅನುಗ್ರಹದಿಂದ ಅವನು ತನ್ನ ಸಾಧನ ಮಾರ್ಗವನ್ನು ಕಂಡುಕೊಳ್ಳುತ್ತಾನೆ. ಓ ನಾನಕ! ಅಂಥವನು ನೀರು ನೀರಿನೊಳಗೆ ಮಿಲನಹೊಂದುವಂತೆ ಸೃಷ್ಟಿಕರ್ತನಲ್ಲಿ ವಿಲೀನಹೊಂದುತ್ತಾನೆ.''

ಇದನ್ನು ರಚಿಸಿದವರು ಸಿಖ್ ಸಂಪ್ರದಾಯದ ಒಂಬತ್ತನೆಯ ಗುರುವಾದ ಗುರು ತೇಗ್ ಬಹದ್ದೂರ್ ಅವರು. ಇವರು ಭಗವದ್ಭಕ್ತರು, ಅನುಭಾವಿಗಳು, ವೀರಯೋಧರು, ಉತ್ತಮ ಕವಿಗಳು, ಆಡಳಿತಗಾರರು, ಎಲ್ಲಕ್ಕಿಂತ ಹೆಚ್ಚಾಗಿ, ಧರ್ಮ ಸಂರಕ್ಷಣೆಗಾಗಿ ಧೈರ್ಯ ಮತ್ತು ಸಾಹಸಗಳಿಂದ ತಮ್ಮ ಪ್ರಾಣವನ್ನೇ ಮುಡಿಪಾಗಿಟ್ಟ ತ್ಯಾಗಿ ಪುರುಷರು.

ಸಿಖ್ ಸಂಪ್ರದಾಯದಲ್ಲಿ ನಾನಕ ದೇವರಿಂದ ಮೊದಲುಗೊಂಡು, ಅವತರಿಸಿ ಬಂದ ಪ್ರತಿಯೊಬ್ಬ ಗುರುವನ್ನೂ ನಾನಕರ ಅವತಾರವೆಂದೇ ಕರೆದು ಪೂಜಿಸಲಾಗುತ್ತದೆ. ಅವರೆಲ್ಲರನ್ನೂ ನಾನಕರೆಂದೇ ಕರೆಯಲಾಗುತ್ತದೆ. ಈ ಪರಂಪರೆಯಲ್ಲಿ ಬಂದ ಆರನೆಯ ಪೂಜ್ಯಗುರುಗಳ ಹೆಸರು ಹರ ಗೋವಿಂದ ಸಿಂಗ್ ಎಂದು. ಇವರ ಪತ್ನಿಯ ಹೆಸರು ನಾನಕಿ.

### ತೇಗ ಬಹದ್ದೂರರ ಜನನ, ಬಾಲ್ಯ ಮತ್ತು ವಿದ್ಯಾಭ್ಯಾಸ

ಅಂದು ಭಾನುವಾರ. ೧೬೨೧ರ ಏಪ್ರಿಲ್ ಒಂದನೆಯ ತಾರೀಖು. ಪುಣ್ಯ ನಗರಿ ಅಮೃತಸರದಲ್ಲಿನ ಗುರುಗಳ ಮನೆಯಲ್ಲಿ ಸಂಭ್ರಮವೋ ಸಂಭ್ರಮ. ನಾನಕಿಗೆ ಒಂದು ಗಂಡುಮಗು ಹುಟ್ಟಿತ್ತು. ಹರಗೋವಿಂದರು ಮಗುವನ್ನು ವೀಕ್ಷಿಸಿದರು. ತಮ್ಮ ತಂದೆ ಪೂಜ್ಯ ಗುರು ಅರ್ಜುನ ದೇವರಂತೆಯೇ ಇದೆ ಎಂದು ಸಂತೋಷಪಟ್ಟರು. 'ಈ ಮಗುವಿಗೆ ಭಗವಂತನ ಆಶೀರ್ವಾದ ಸದಾ ಇರಲಿ' ಎಂದು ಆಶೀರ್ವದಿಸಿದರು. ಮಗುವಿನ ಶುಭ ಲಕ್ಷಣಗಳನ್ನು ಕಂಡು ಹರ್ಷಪಟ್ಟರು. ಮಗುವು ಮುಗುಳು ನಗುವನ್ನು ಹೊರಸೂಸುತ್ತಿತ್ತು. ಕಣ್ಣುಗಳು ಜ್ಞಾನಪ್ರಭೆಯಿಂದ ಬೆಳಗುತ್ತಿದ್ದವು. ಆಧ್ಯಾತ್ಮಿಕ ಬೆಳಕು ಮಗುವಿನ ಮುಖದಿಂದ ಹೊಮ್ಮುತ್ತಿತ್ತು. ಮಗುವಿಗೆ ತ್ಯಾಗ್‌ಮಲ್ ಎಂದು ಹೆಸರಿಟ್ಟರು. ತ್ಯಾಗವೀರ ಎಂದು ಈ ಹೆಸರಿನ ಅರ್ಥ.

ಹುಡುಗನಿಗೆ ಈಗ ಆರು ವರ್ಷ. ತಂದೆ ಅಂದಿನ ಕಾಲದ ಪ್ರಸಿದ್ಧ ಜ್ಞಾನವೃದ್ಧರಾದ ಭಾಯಿ ಬುದ್ಧ ಎಂಬ ಮಹನೀಯರ ಹತ್ತಿರ ಮಗನನ್ನು ಕರೆದುಕೊಂಡು ಹೋದರು. ''ದಯವಿಟ್ಟು ಇವನನ್ನು ನಿಮ್ಮ ಶಿಷ್ಯನನ್ನಾಗಿ ಸ್ವೀಕರಿಸಿರಿ'' ಎಂದು ಕೇಳಿಕೊಂಡರು. ತ್ಯಾಗ್‌ಮಲ್ ಗುರುಗಳಿಗೆ ತಲೆಬಾಗಿದನು. ಈ ಶಿಕ್ಷಕರು ಯುದ್ಧ ವಿದ್ಯೆಯನ್ನು ಬಾಲಕನಿಗೆ ಬೋಧಿಸಿದರು. ಕೆಲವೇ ಸಮಯದಲ್ಲಿ ತ್ಯಾಗಮಲ್ ಬಿಲ್ಲುಗಾರಿಕೆ, ಕತ್ತಿವರಸೆ, ಕುದುರೆ ಸವಾರಿ – ಇವುಗಳಲ್ಲಿ ಪ್ರವೀಣನಾದನು. ಭಾಯಿ ಗುರುದಾಸ್ ಎಂಬ ಮತ್ತೊಬ್ಬ ವಿದ್ವಾಂಸರು ಅವನಿಗೆ ಗುರುಮುಖಿ, ಹಿಂದಿ, ಸಂಸ್ಕೃತ ಮುಂತಾದ ಭಾಷೆಗಳನ್ನು ಕಲಿಸಿದರು. ಅಲ್ಲದೆ ಸಿಖ್ ಧಾರ್ಮಿಕ ಸಂಪ್ರದಾಯದ ಪವಿತ್ರ ಗ್ರಂಥಗಳನ್ನು ಕೂಡ ಹೇಳಿಕೊಟ್ಟರು.

### ವೀರ ನಾಮಧೇಯ

ತ್ಯಾಗ್‌ಮಲ್‌ನಿಗೆ ಕೇವಲ ೧೩ ವರ್ಷ ವಯಸ್ಸಾಗಿದ್ದಾಗ ಒಂದು ಮಹತ್ವದ ಘಟನೆ ನಡೆಯಿತು. ಪೈಂದೇ ಖಾನ್ ಎಂಬ ಮೊಗಲರ ಸರದಾರನು ದಂಡಿನೊಡನೆ ದಾಳಿಮಾಡಿದನು. ಅವನು

ಹಿಂದೆ ಹರಗೋವಿಂದರ ಕೆಳಗೆ ಇದ್ದವನೇ. ಈ ಯುದ್ಧದಲ್ಲಿ ಎಳೆಯ ಬಾಲಕ ತ್ಯಾಗ್‌ಮಲ್ ಕೂಡ ಪಾಲ್ಗೊಂಡನು. ತನ್ನ ಪುಟ್ಟ ಕೈಗಳಲ್ಲಿ ಕತ್ತಿಯನ್ನು ಹಿಡಿದು ಅತ್ತಲೂ ಇತ್ತಲೂ ಝಳಪಿಸುತ್ತ ಕದನ ಮಾಡಿದನು. ಈ ಯುದ್ಧದಲ್ಲಿ ಸಿಖ್ಖರ ಸೈನ್ಯಕ್ಕೆ ಗೆಲುವಾಯಿತು. ಸೈನಿಕರು ಈ ಯುವ ವೀರನ ಪರಾಕ್ರಮವನ್ನು ಕೊಂಡಾಡಿದರು. ಅವನಿಗೊಂದು 'ವೀರ ನಾಮಧೇಯ' ವನ್ನು ನೀಡಬೇಕೆಂದು ಆಶಿಸಿದರು. ಅವನಿಗೆ **ತೇಗ್ ಬಹದ್ದೂರ್** (ಉತ್ತಮ ಕತ್ತಿ ವರಸೆಗಾರ) ಎಂಬ ಹೆಸರನ್ನು ಇಟ್ಟರು. ಅಂದಿನ ತ್ಯಾಗಮಲ್, ತೇಗ್ ಬಹದ್ದೂರ್ ಎನ್ನಿಸಿದನು.

### ಆಧ್ಯಾತ್ಮಿಕ ಸಾಧನೆ, ವಿವಾಹ

ಮುಂದಿನ ಹತ್ತು ವರ್ಷಗಳನ್ನು ತೇಗ್ ಬಹದ್ದೂರರ ತಂದೆ ಹರಗೋವಿಂದ ಸಿಂಗ್ ಕಿರಾತ್‌ಪುರ್ ಎಂಬಲ್ಲಿ ಕಳೆದರು. ಅಲ್ಲಿ ಬಹಳಷ್ಟು ಕಾಲವನ್ನು ಧ್ಯಾನತಪಗಳಲ್ಲಿಯೂ, ಸಿಖ್ ಧರ್ಮದ ಪ್ರಸಾರದಲ್ಲಿಯೂ ಸವೆಸಿದರು. ೧೬೩೨ರಲ್ಲಿ ತೇಗ್ ಬಹದ್ದೂರರ ವಿವಾಹವಾಯಿತು. ಹೆಂಡತಿಯ ಹೆಸರು ಗುಜ್ರಿ ಎಂದು. ದೇಹ ತ್ಯಾಗವನ್ನು ಮಾಡುವ ಮೊದಲು ಹರ ಗೋವಿಂದ ಸಿಂಗ್, ತಮ್ಮ ಮೊದಲ ಮಗನಾದ ಭಾಯಿ ಗುರುದತ್ತನ ಪುತ್ರ ಹರಿರಾಯನನ್ನು ಉತ್ತರಾಧಿಕಾರಿಯನ್ನಾಗಿ ಮಾಡಿದರು. ಭಾಯಿ ಗುರುದತ್ತ ಆ ವೇಳೆಗೆ ಅಕಾಲ ಮರಣವನ್ನು ಅಪ್ಪಿದ್ದರು. ಇದಲ್ಲದೆ ತೇಗ್ ಬಹದ್ದೂರನನ್ನು ಪತ್ನಿಯ ಜೊತೆಯಲ್ಲಿ ಬಕಾಲ ಎಂಬ ಗ್ರಾಮಕ್ಕೆ ಹೋಗಿ ನೆಲೆಸುವಂತೆ ಹೇಳಿದರು. ಹರಗೋವಿಂದರು ೧೬೪೪ರಲ್ಲಿ ದೇಹತ್ಯಾಗ ಮಾಡಿದರು.

ತಂದೆಯ ಅಪ್ಪಣೆಯಂತೆ ತೇಗ್ ಬಹದ್ದೂರ್ ಹೆಂಡತಿ ಮತ್ತು ತಾಯಿಯರನ್ನು ಕರೆದುಕೊಂಡು, ಬಕಾಲ ಗ್ರಾಮದಲ್ಲಿ ವಾಸ್ತವ್ಯ ಹೂಡಿದರು. ಭಾಯಿ ಮೆಹ್ರಾ ಎಂಬ ಭಕ್ತನು ನೂತನವಾಗಿ ಕಟ್ಟಿದ್ದ ಮನೆಯನ್ನು ಬಿಟ್ಟುಕೊಟ್ಟನು. ಅಲ್ಲಿನ ಒಂದು ಕೊಠಡಿಯಲ್ಲಿ ಬೆಳಗ್ಗೆ ಮತ್ತು ಸಾಯಂಕಾಲ ಸುದೀರ್ಘ ಕಾಲದವರೆಗೆ ಭಗವದ್ಧ್ಯಾನದಲ್ಲಿ ತೇಗ್ ಬಹದ್ದೂರ್ ತಲ್ಲೀನರಾಗುತ್ತಿದ್ದರು. ಇದರ ಜೊತೆಗೆ ಹಲವಾರು ಕರ್ತವ್ಯಗಳನ್ನು ನಿಭಾಯಿಸುತ್ತಿದ್ದರು. ಬಂದ ಸಂದರ್ಶಕರಿಗೆ ಆಧ್ಯಾತ್ಮಿಕ ಉಪದೇಶ ಮಾಡುತ್ತಿದ್ದರು. ಅಲ್ಲದೆ ಒಮ್ಮೊಮ್ಮೆ ಹತ್ತಿರದ ಕಾಡಿಗೆ ಹೋಗಿ ಬೇಟೆಯಾಡುತ್ತಿದ್ದರು. ಆ ಅವಧಿಯಲ್ಲಿ ನಿಸರ್ಗದ ಸುಂದರ ಪರಿಸರದಲ್ಲಿ ಭಗವಚ್ಚಿಂತನೆಯಲ್ಲಿ ಮಗ್ನರಾಗಿ ಹೋಗುತ್ತಿದ್ದರು. ಇವರು ಯಾವುದೇ ರೀತಿಯ ಹಠಯೋಗವನ್ನು ಅಭ್ಯಾಸ ಮಾಡಲಿಲ್ಲ. ಯಾವತ್ತೂ ಪರಮೇಶ್ವರನ ಪ್ರಜ್ಞಾಪೂರ್ವಕ ಅನುಭೂತಿಯಲ್ಲಿ ಕಾಲಕಳೆಯುತ್ತಿದ್ದರು. ತಮ್ಮ ಹೃದಯದಲ್ಲಿನ ವಿಶ್ವವ್ಯಾಪಿ ಪರಮಾತ್ಮನಲ್ಲಿ ತಾದಾತ್ಮ್ಯಭಾವವನ್ನು ಹೊಂದುತ್ತಿದ್ದರು. ಸಿಖ್ ಸಂಪ್ರದಾಯದ ಸಾಧನಾ ಪದ್ಧತಿಯಂತೆ, ತೇಗ್ ಬಹದ್ದೂರ್ ಪ್ರಪಂಚವನ್ನೇನೂ ತ್ಯಜಿಸಲಿಲ್ಲ. ಆದರೆ ಪ್ರಾಪಂಚಿಕತೆಯನ್ನು ತ್ಯಾಗಮಾಡಿದರು. ಅನಾಸಕ್ತಬುದ್ಧಿಯಿಂದ ನಿಸ್ಪೃಹರಾಗಿ ಇದ್ದುಬಿಟ್ಟರು. ಸುತ್ತಲ ಜಗತ್ತಿನ ಯಾವ ಆಗುಹೋಗುಗಳಿಂದಲೂ ಪ್ರಭಾವಿತರಾಗದೆ ಭಗವದಾನಂದದಲ್ಲಿ ಮುಳುಗಿಹೋಗಿದ್ದರು.

ತೇಗ್ ಬಹದ್ದೂರರನ್ನು ಕಾಣಲು ಬಂದವರೆಲ್ಲರೂ ದಿವ್ಯ ಪ್ರಭೆ ಹೊರಸೂಸುತ್ತಿದ್ದ ಅವರ ಮುಖಮಂಡಲವನ್ನು ಕಂಡು ವಿಸ್ಮಿತರಾಗುತ್ತಿದ್ದರು. ದಿವ್ಯಾನಂದವು ಅವರ ಮುಖದಿಂದ ಹೊರ ಸೂಸುತ್ತಿತ್ತು. ಕಣ್ಣುಗಳು ಭಗವತ್‌ಪ್ರೇಮದಿಂದ ಆರ್ದ್ರವಾಗಿದ್ದವು. ಅತ್ಯಂತ ವಿನೀತಭಾವದಿಂದ ನಡೆದುಕೊಳ್ಳುತ್ತಿದ್ದರು. ಅಂತರಂಗದ ಜ್ಯೋತಿಯು ಅವರ ದೈನ್ಯತೆಯ ಪರದೆಯಲ್ಲಿ ಅಡಗಿತ್ತು. ಅವರ ಹೃದಯವು ಮಾನವತೆಯ ಕಷ್ಟದುಮ್ಮಾನಗಳ ಬಗ್ಗೆ ಅಪಾರ ಅನುಕಂಪದಿಂದ ತುಂಬಿಹೋಗಿತ್ತು. ಎಲ್ಲಕ್ಕಿಂತ ಹೆಚ್ಚಾಗಿ, ಸಾಧಾರಣ ಜನರ ಅರಿವಿಗೆ ಬರದಂತೆ, ಸತ್ಯ ಮತ್ತು ಸೌಂದರ್ಯಗಳು ಸೂರೆಹೋಗಿರುವ ಭಗವದ್ರಾಜ್ಯದಲ್ಲಿ ಅವರು ವಿಹರಿಸುತ್ತಿದ್ದರು. ತಮ್ಮ ತಂದೆಯಂತೆಯೇ ಭಗವನ್ನಾಮದ ಧ್ಯಾನ ಮತ್ತು ಸಂಕೀರ್ತನೆಗಳಲ್ಲಿ ಮಗ್ನರಾಗಿ ಆಧ್ಯಾತ್ಮಿಕ ಶಿಖರವನ್ನು ಏರಿ ನಿಂತರು. ದಿವ್ಯ ಪ್ರೇಮ, ದಿವ್ಯ ಜ್ಯೋತಿ ಮತ್ತು ದಿವ್ಯ ಶಾಂತಿಗಳ ಬಾಳನ್ನು ಬಾಳುತ್ತಿದ್ದರು.

### ಸಿಖ್ ಗುರುವಾಗಿ ನೇಮಕ

ಈ ಅವಧಿಯಲ್ಲಿ ಸಿಖ್ ಸಂಪ್ರದಾಯದ ಗುರುವಾಗಿದ್ದ ಹರಿರಾಯ್ ಮರಣಹೊಂದಿದ್ದರು. ಅವರ ಉತ್ತರಾಧಿಕಾರಿಯಾಗಿ ಗುರು ಹರಿಕೃಷ್ಣಜಿ ನೇಮಕಗೊಂಡರು. ಅವರು ಕೂಡ ಬಹಳ ಕಾಲ ಬದುಕಲಿಲ್ಲ. ಅಂತ್ಯಕಾಲದಲ್ಲಿ ತಮ್ಮ ಉತ್ತರಾಧಿಕಾರಿಯ ಬಗ್ಗೆ ಪ್ರಶ್ನಿಸಿದಾಗ, 'ಬಾಬಾ ಬಕಾಲೇ' ( ಗುರುವು ಬಕಾಲ ಗ್ರಾಮದಲ್ಲಿ ದೊರಕುತ್ತಾರೆ) ಎಂದು ಉದ್ಗರಿಸಿದರಂತೆ. ಇದನ್ನು ಕೇಳಿ ಅಮೃತಸರದಲ್ಲಿನ ಪುಣ್ಯಮಂದಿರದ ಪುರೋಹಿತ ವರ್ಗವಾದ ಸೋಧಿ ಕುಟುಂಬದ ೨೨ ಜನರು ಬಕಾಲಾ ಗ್ರಾಮಕ್ಕೆ ಬಂದು ಠಿಕಾಣಿ ಹೂಡಿದರು. ತಾವೇ ಮುಂದಿನ ಗುರು ಎಂದು ಹೇಳುತ್ತ ಜನರನ್ನು ಅವರು ಮರಳು ಮಾಡುತ್ತಿದ್ದರು. ಇದರಿಂದಾಗಿ ಸಿಖ್ ಸಂಪ್ರದಾಯದಲ್ಲಿ ದೊಡ್ಡದೊಂದು ಗೊಂದಲವುಂಟಾಯಿತು.

ಈ ಗೊಂದಲಕ್ಕೆ ದೈವವೇ ಪರಿಹಾರವನ್ನು ಸೂಚಿಸಿತು. ಮಾಖನ್ ಸಿಂಗ್ ಎಂಬ ಶ್ರೀಮಂತ ವರ್ತಕನಿದ್ದನು. ಅವನ ಹಡಗು ಬಿರುಗಾಳಿಗೆ ಸಿಕ್ಕಿತ್ತು. ಹಡಗು ಕ್ಷೇಮವಾಗಿ ದಡವನ್ನು ತಲುಪಿದರೆ, ಶ್ರೀ ಗುರು ಹರಿಕೃಷ್ಣರಿಗೆ ೫೦೦ ಚಿನ್ನದ ಮೊಹರುಗಳನ್ನು ಕೊಡುವೆನೆಂದು ಅವನು ಹರಕೆ ಹೊತ್ತುಕೊಂಡಿದ್ದನು. ಅದೃಷ್ಟವಶಾತ್ ಹಡಗು ಸುರಕ್ಷಿತವಾಗಿ ದಡವನ್ನು ತಲುಪಿತು. ಮಾಖನ್ ಸಿಂಗ್ ಬಹಳ ಶ್ರದ್ಧಾಳು ಸಿಖ್. ೫೦೦ ಚಿನ್ನದ ಮೊಹರುಗಳನ್ನು ತೆಗೆದುಕೊಂಡು ಗುರುವಿನ ಬಳಿ ಹೋದನು. ಅಷ್ಟರಲ್ಲಿ ಗುರು ಹರಿಕೃಷ್ಣರು ನಿಧನಹೊಂದಿದ್ದರು. 'ಹೊಸ ಗುರುವು ಬಕಾಲ ಗ್ರಾಮದಲ್ಲಿ ಇರುವನು' ಎಂದು ಗುರುವು ಹೇಳಿದ್ದಾರೆ ಎಂದು ಕೇಳಿ ತಿಳಿದನು. ಅಲ್ಲಿಗೆ ಬಂದು ನೋಡಿದರೆ ಸೋಧಿ ಕುಟುಂಬಕ್ಕೆ ಸೇರಿದ ೨೨ ಜನರು ಅಲ್ಲಿಯೇ ವಾಸ್ತವ್ಯ ಹೂಡಿದ್ದರು. ತಾವೇ ನಿಜವಾದ ಗುರು ಎಂದು ಜನರನ್ನು ಮರಳು ಮಾಡಿ ಹಣ ದೋಚುತ್ತಿದ್ದರು. ಅವರನ್ನು ಪರೀಕ್ಷಿಸಬೇಕೆಂದು, ಮಖಾನ್ ಸಿಂಗ್ ಪ್ರತಿಯೊಬ್ಬರಿಗೂ ಎರಡೆರಡು ವರಹಗಳನ್ನು ಕೊಟ್ಟನು. ಅವರೆಲ್ಲ ಅವನನ್ನು ಹರಿಸಿದರು. 'ನನ್ನ ಅಂತರಂಗದ ಬಯಕೆ ಇವರಿಗೆ ತಿಳಿಯ

ಲಿಲ್ಲ. ಹೀಗಾಗಿ ಇವರು ಗುರುಗಳಾಗಲು ಸಾಧ್ಯವಿಲ್ಲ' ಎಂದು ಮಾಖನ್ ಸಿಂಗ್ ನಿರ್ಧರಿಸಿ, ನಿರಾಶೆಯಿಂದ ಗ್ರಾಮವನ್ನು ಬಿಡುವುದರಲ್ಲಿ ಇದ್ದನು. ಆ ಸಮಯದಲ್ಲಿ ಒಬ್ಬ ಹುಡುಗ ಅವನಿಗೆ ಹೇಳಿದ, ''ಇಲ್ಲೊಂದು ಮನೆಯಿದೆ. ಅದರ ನೆಲ ಅಂತಸ್ತಿನ ಕೆಳಗಿನ ಕೊಠಡಿಯಲ್ಲಿ ಗುರುಗಳೊಬ್ಬರು ಧ್ಯಾನ ಮಾಡುತ್ತಾರೆ.' ನೋಡೋಣವೆಂದು ಮಾಖನ್ ಸಿಂಗ್ ಅಲ್ಲಿಗೆ ಹೋದ. ಅದು ತೇಗ್ ಬಹದ್ದೂರ್ ನೆಲೆಸಿದ್ದ ಮನೆಯಾಗಿತ್ತು.

ಗುರುಗಳ ಮುಖಕಾಂತಿಯನ್ನು ಕಂಡು ಮಾಖನ್ ಸಿಂಗ್ ಮಂತ್ರಮುಗ್ಧನಾದನು. ಪರೀಕ್ಷಿಸಿ ನೋಡೋಣವೆಂದು ಅವರಿಗೂ ಎರಡು ಚಿನ್ನದ ಮೊಹರುಗಳನ್ನು ನಿವೇದಿಸಿ ನಮಸ್ಕರಿಸಿದನು. ಗುರು ತೇಗ್ ಬಹದ್ದೂರ್ ಮುಗುಳು ನಗುತ್ತ, ''ಅಪ್ಪಾ, ಮಾಖನ್ ಸಿಂಗ್, ನಿನ್ನ ಹರಕೆಯನ್ನು ಏಕೆತಾನೇ ಮುರಿಯುತ್ತೀಯೆ? ನಿನ್ನ ಹಡಗನ್ನು ಕಾಪಾಡೆಂದು ಭಗವಂತನನ್ನು ಪ್ರಾರ್ಥಿಸಿಕೊಂಡಾಗ, ಗುರುಗಳಿಗೆ ೫೦೦ ಚಿನ್ನದ ಮೊಹರುಗಳನ್ನು ಅರ್ಪಿಸುವೆಯೆಂದು ಹರಕೆ ಹೊತ್ತುಕೊಂಡಿರುವೆ'' ಎಂದರು. ಇದನ್ನು ಕೇಳಿ ಮಾಖನ್ ಸಿಂಗ್ ಸಂತೋಷದಿಂದ ಕುಣಿದಾಡಿದನು. ಇನ್ನುಳಿದ ಮೊಹರುಗಳನ್ನು ಗುರುಗಳ ಪಾದಗಳಿಗೆ ಅರ್ಪಿಸಿಬಿಟ್ಟನು. ಗುರು ಹರಿಕೃಷ್ಣರು ಉಲ್ಲೇಖಿಸಿದ್ದ ಮುಂದಿನ ಗುರು ಇವರೇ ಎಂದು ನಿಶ್ಚಯಿಸಿದನು. ಆನಂದದಿಂದ ಮನೆಯ ಮಾಳಿಗೆಯನ್ನು ಏರಿನಿಂತು, ''ನಿಜವಾದ ಗುರುಗಳನ್ನು ಕಂಡುಹಿಡಿದಿದ್ದೇನೆ. ಓ ಸಿಖ್ ಜನರೇ, ಬನ್ನಿ, ಪೂಜ್ಯ ಗುರುಗಳ ದರ್ಶನವನ್ನು ಪಡೆದುಕೊಂಡು ಧನ್ಯರಾಗಿ'' ಎಂದು ಕೂಗಿ ಹೇಳಿದನು.

''ಗುರುಗಳೇ ದಯವಿಟ್ಟು ಭಕ್ತಸಂಘವನ್ನು ಅನುಗ್ರಹಿಸಿ'' ಎಂದು ಮಾಖನ್ ಸಿಂಗ್ ಕೇಳಿಕೊಂಡನು. ''ಭಕ್ತಜನರು ಬರುವುದನ್ನು ನಾನು ಹೇಗೆ ತಾನೇ ನಿರಾಕರಿಸಲಿ? ನಾನು ನನ್ನ ಭಕ್ತಸಂಘದ ಸೇವಕ'' ಎಂದು ತುಂಬು ವಿನಯದಿಂದ ಹೇಳಿದರು ಗುರುಗಳು. ಮಾಖನ್ ಸಿಂಗನ ಕರೆಯನ್ನು ಆಲಿಸಿದ ಭಕ್ತಜನರು ತೇಗ್ ಬಹದ್ದೂರರ ಮನೆಗೆ ಓಡೋಡಿ ಬಂದರು. ಪೂಜ್ಯ ಗುರೂಜಿಯ ಆಶೀರ್ವಾದ ಪಡೆದುಕೊಂಡರು. ಉಳಿದೆಲ್ಲ ಸುಳ್ಳು ಗುರುಗಳು ಅಲ್ಲಿಂದ ಪಲಾಯನ ಮಾಡಿದರು.

ಗುರು ತೇಗ್ ಬಹದ್ದೂರರು ಅತ್ಯಂತ ಮೃದು ಹೃದಯದವರು. ಇತರರ ಕಷ್ಟಗಳಿಗೆ ಅವರ ಮನಸ್ಸು ಬೆಣ್ಣೆಯಂತೆ ಕರಗುತ್ತಿತ್ತು. ಅವರು ರಚಿಸಿದ ಕೀರ್ತನೆಗಳಲ್ಲಿ ಅವರ ಈ ಆರ್ದ್ರ ಭಾವವನ್ನು ಕಾಣಬಹುದು. ಹೃದಯದ ಅಂತರಂಗದ ಶಾಂತ ಪರಿಸರದಲ್ಲಿ ಜನರಿಗಾಗಿ ಅವರು ಕಣ್ಣೀರು ಮಿಡಿಯುತ್ತಿದ್ದುದನ್ನು ಅವರ ರಚನೆಗಳಲ್ಲಿ ಗುರುತಿಸಬಹುದು. ''ಓ ಮಾನವ, ಜಗತ್ತಿನ ಮಾಯೆಯಿಂದ ಹೊರಗೆ ಬಂದು ಭಗವಂತನ ಪ್ರೇಮವನ್ನು ಅಪ್ಪಿಕೋ'' ಎಂಬುದೇ ಅವರ ಸಂದೇಶವಾಗಿತ್ತು.

## ಅಮೃತಸರಕ್ಕೆ

ಸಿಖ್ ಸಂಪ್ರದಾಯದ ೯ನೆಯ ಗುರುಗಳಾಗಿ ಹೀಗೆ ಗುರು ತೇಗ್ ಬಹದ್ದೂರರು ಆಯ್ಕೆಗೊಂಡರು. ಕೆಲವು ದಿನಗಳಲ್ಲಿಯೇ ತಮ್ಮ ಕುಟುಂಬದೊಂದಿಗೆ ಅಮೃತಸರಕ್ಕೆ ಹೊರಟರು. ಹಲವಾರು ಭಕ್ತಜನರು ಅವರನ್ನು ಹಿಂಬಾಲಿಸಿದರು. ನೂರಾರು ಜನರು ಅವರ ದರ್ಶನ ಪಡೆದುಕೊಳ್ಳಲು ಕಾದಿದ್ದರು. ಅಮೃತಸರದ ಪೂಜ್ಯ ಮಂದಿರಕ್ಕೆ ಗುರುಗಳು ಪದಾರ್ಪಣ ಮಾಡಿದರು. ಆದರೆ ಸಿಖ್ ಗುರುಗಳ ಮೇಲೆ ವೈಷಮ್ಯವನ್ನು ಬೆಳೆಸಿಕೊಂಡಿದ್ದ ಅಲ್ಲಿನ ಪುರೋಹಿತ ವರ್ಗ ಅವರನ್ನು ಪವಿತ್ರ ಮಂದಿರದ ಒಳಕ್ಕೆ ಬಿಡಲೇ ಇಲ್ಲ. ಹತ್ತಿರದ ಒಂದು ಮರದ ಕೆಳಗೆ ಗುರುಗಳು ಹಲವು ಗಂಟೆಗಳ ಕಾಲ ನಿರೀಕ್ಷೆ ಮಾಡಿದರು. ಆದರೂ ಅವರಿಗೆ ಪ್ರವೇಶವನ್ನು ನಿರಾಕರಿಸಲಾಯಿತು. ಸ್ಥಿತಪ್ರಜ್ಞರಾದ ಗುರು ಏನನ್ನೂ ಮಾತನಾಡದೆ, ಹೊರಡಲು ಎದ್ದು ನಿಂತರು. ಇದರಿಂದ ಶಿಷ್ಯರಿಗೆ ಕೋಪ ಬಂತು. ಬಲ ಪ್ರದರ್ಶನ ಮಾಡಿ ಒಳಗೆ ಹೋಗಬೇಕೆಂದು ಒತ್ತಾಯಿಸಿದರು. ಅದಕ್ಕೆ ಗುರುಗಳು ಸಮಾಧಾನದಿಂದ ಹೀಗೆ ಹೇಳಿದರು: ''ಇಲ್ಲ, ಇಲ್ಲ; ನಾವೆಂದಿಗೂ ಬಲಪ್ರದರ್ಶನ ಮಾಡಬಾರದು. ನಾನಕ ದೇವರ ಆಧ್ಯಾತ್ಮಿಕ ಬೆಳಕು ಎಲ್ಲಿ ಬೆಳಗುತ್ತಿದೆಯೋ, ಅದೇ ಪವಿತ್ರವಾದ ದೇವಮಂದಿರ.''

ಅಷ್ಟರಲ್ಲಿ ಹರಿಯನ್ ಎಂಬ ವಯಸ್ಸಾದ ರೈತ ಮಹಿಳೆ ಗುರುಗಳಿಗೆ ನಮಸ್ಕಾರ ಮಾಡಿದಳು. ಅವಳ ಗುಡಿಸಿಲಿನಲ್ಲಿ ಆ ರಾತ್ರಿಯನ್ನು ಕಳೆಯಬೇಕೆಂದು ಪ್ರಾರ್ಥಿಸಿಕೊಂಡರು. ತನ್ನಲ್ಲಿ ಇದ್ದುದೆಲ್ಲವನ್ನೂ ಗುರುಗಳ ಮತ್ತು ಅವರ ಅನುಚರರ ಸೇವೆಗೆ ಮುಡಿಪಾಗಿಟ್ಟಳು. ಗುರುಗಳು ವೃದ್ಧೆಯ ಆತಿಥ್ಯವನ್ನು ಪ್ರೀತಿಯಿಂದ ಸ್ವೀಕರಿಸಿದರು. ಈ ವಾರ್ತೆ ಅಮೃತಸರ ನಗರದಾದ್ಯಂತ ಎಲ್ಲೆಡೆ ತಲುಪಿತು. ಭಕ್ತಜನರು ಗುಂಪುಗುಂಪಾಗಿ ಬಂದು ಗುರುಗಳ ದರ್ಶನ ಪಡೆದರು. ಅದರಲ್ಲೂ ಮಹಿಳಾ ಭಕ್ತರು ಭಾರೀ ಸಂಖ್ಯೆಯಲ್ಲಿ ಬಂದು ಕೀರ್ತನೆಗಳನ್ನು ಹಾಡುತ್ತ ಸತ್ಸಂಗದಲ್ಲಿ ಪಾಲ್ಗೊಂಡರು. ''ಅಮೃತಸರದ ಮಹಿಳೆಯರು ಧನ್ಯರು'' ಎಂದು ಗುರುಗಳು ಉದ್ಗರಿಸಿದರು. ಅಮೃತಸರದ ಪೂಜ್ಯಮಂದಿರ ಕೂಡ ಕ್ರಮೇಣ ಗುರುಗಳ ಮತ್ತು ಭಕ್ತರ ವಶಕ್ಕೆ ಬಂದಿತು.

## ನಾನಕ ಧರ್ಮ ಪ್ರಚಾರ

ಗುರು ತೇಗ್ ಬಹದ್ದೂರರು ತದನಂತರ ಗುರುನಾನಕ ದೇವರ ಬೋಧನೆಗಳನ್ನು ಪ್ರಸಾರ ಮಾಡಲು ಮತ್ತು ಸಿಖ್ ಸಂಪ್ರದಾಯದ ಜನರಲ್ಲಿ ಆತ್ಮವಿಶ್ವಾಸ ಮೂಡಿಸಲು ವಿಸ್ತಾರವಾದ ಪ್ರವಾಸವನ್ನು ಕೈಗೊಂಡರು. ಕಿರಾತ್‌ಪುರ ಎಂಬ ತಮ್ಮ ಕುಟುಂಬದ ಮೂಲ ನಗರಕ್ಕೆ ಮೂರು ಸಲ ಭೇಟಿಕೊಟ್ಟರು. ಇದಲ್ಲದೆ ಪಂಜಾಬಿನ ಮಾಲ್ವಾ ಮತ್ತು ಬಂಗರ್ ಪ್ರದೇಶಗಳಲ್ಲಿ ಪ್ರವಾಸ ಕೈಗೊಂಡರು. ಚರಿತ್ರಕಾರರ ಪ್ರಕಾರ ೧೬೬೫ರಲ್ಲಿ ಬೈಸಾಖಿ ಹಬ್ಬವನ್ನು ತಲವಂಡಿ ಎಂಬ ಗ್ರಾಮದಲ್ಲಿ ಭವ್ಯವಾಗಿ ಆಚರಿಸಿದರು.

ಗುರು ತೇಗ್ ಬಹದ್ದೂರರ ಒಂದು ಮಹತ್ತರ ಸಾಧನೆಯೆಂದರೆ ಆನಂದಪುರ ಎಂಬ ಹೊಸನಗರದ ಸ್ಥಾಪನೆ. ಗುರುಗಳು ಈ ಸ್ಥಾನವನ್ನು ೫೦೦ ರೂಪಾಯಿಗಳಿಗೆ ಕೊಂಡುಕೊಂಡರು. ಅಲ್ಲಿನ ಮಣ್ಣು ದಿಬ್ಬದ ಜಾಗದಲ್ಲಿ ಹೊಸನಗರದ ನಿರ್ಮಾಣಕ್ಕೆ ಆದೇಶವನ್ನು ಇತ್ತರು. ಈ ಊರಿನ ಹಿಂದಿನ ಹೆಸರು ಚಕ್ ನಾನಕಿ ಎಂಬುದಾಗಿತ್ತು. ಮುಂದೆ ೧೦ನೆಯ ಗುರುವಾದ ಗುರು ಗೋವಿಂದ ಸಿಂಗ್ ಈ ಊರಿನಲ್ಲಿಯೇ 'ಖಾಲ್ಸಾ'ವನ್ನು ಹುಟ್ಟುಹಾಕಿದರು.

ಮುಂದೆ ತೇಗ್ ಬಹದ್ದೂರರು ಭಾರತದ ಪೂರ್ವದಿಕ್ಕಿನ ಪ್ರದೇಶಗಳಿಗೆ ದೀರ್ಘ ಪ್ರವಾಸವನ್ನು ಕೈಗೊಂಡರು. ಉತ್ತರ ಪ್ರದೇಶ, ಬಿಹಾರ್, ಅಸ್ಸಾಮ್ ಮತ್ತು ಬಂಗಾಳ ಪ್ರದೇಶಗಳಲ್ಲಿ ಅವರು ಯಾತ್ರೆ ಮಾಡಿದರು. ಗುರುನಾನಕ್ ಭೇಟಿಕೊಟ್ಟಿದ್ದ ಸ್ಥಳಗಳಿಗೆಲ್ಲ ಹೋಗಿ, ಅವರಿಗೆ ಗೌರವ ಸಲ್ಲಿಸಿದರು. ಎಲ್ಲೆಲ್ಲಿ ಸಿಖ್ ಭಕ್ತಸಂಘಗಳಿವೆಯೋ, ಅಲ್ಲೆಲ್ಲ ಹೋಗಿ ಜನರಲ್ಲಿ ಹೊಸ ಉತ್ಸಾಹವನ್ನು ಮೂಡಿಸಿದರು. ನೈತಿಕವಾಗಿ ಹಾಗೂ ಆಧ್ಯಾತ್ಮಿಕವಾಗಿ ಧೈರ್ಯವನ್ನು ತುಂಬಿದರು. ಗುರು ನಾನಕರ ಸಂದೇಶದ ಗಾಢ ಅರಿವನ್ನು ಭಕ್ತರಲ್ಲಿ ಉಂಟುಮಾಡಿದರು.

ಅವರು ಪಂಜಾಬಿನ ಪಕ್ಕದಲ್ಲಿಯೇ ಇರುವ ಕುರುಕ್ಷೇತ್ರಕ್ಕೆ ಹೋದಾಗ ಸೂರ್ಯಗ್ರಹಣವಾಗುತ್ತಲಿತ್ತು. ಸಾವಿರಾರು ಜನರು ಅಲ್ಲಿನ ಪುಣ್ಯತೀರ್ಥದಲ್ಲಿ ಸ್ನಾನ ಮಾಡಲು ನೆರೆದಿದ್ದರು. ಅಲ್ಲಿದ್ದ ಬ್ರಾಹ್ಮಣರು ಪುಣ್ಯಸ್ನಾನವನ್ನು ಮಾಡುವಂತೆ ಗುರುಗಳನ್ನು ಕೇಳಿಕೊಂಡಾಗ ಅವರು ಹೀಗೆ ಹೇಳಿದರು, ''ಸ್ನೇಹಿತರೇ, ಬರಿ ದೇಹವನ್ನು ನೀರಿನಿಂದ ಶುದ್ಧಿ ಮಾಡಿದರೆ ಸಾಲದು. ಕೊಳಕಾದ ಮನಸ್ಸನ್ನೂ ಪರಿಶುದ್ಧಗೊಳಿಸಬೇಕು. ಭಗವಂತನ ನಿಜನಾಮವೊಂದೇ ಎಲ್ಲ ಪಾಪಗಳಿಂದ ನಮ್ಮನ್ನು ಪವಿತ್ರಗೊಳಿಸಬಹುದು, ಮೋಕ್ಷವನ್ನು ನೀಡಬಹುದು.'' ಮೂಢನಂಬಿಕೆ ಮತ್ತು ಮೂಢಾಚರಣೆಗಳನ್ನು ಗುರುನಾನಕರು ನಿಂದಿಸುತ್ತಿದ್ದರು. ಗುರು ತೇಗ್ ಬಹದ್ದೂರರೂ ಇದೇ ಮಾರ್ಗವನ್ನು ಅನುಸರಿಸಿದರು.

೧೬೬೬ರಲ್ಲಿ ತೇಗ್ ಬಹದ್ದೂರರು ಪಾಟ್ನಾ ನಗರದಲ್ಲಿ ವಾಸ್ತವ್ಯ ಹೂಡಿದ್ದರು. ಅಲ್ಲಿಯೇ ತಮ್ಮ ಕುಟುಂಬವನ್ನು ಬಿಟ್ಟು, ಅಸ್ಸಾಮ್, ಬಂಗಾಳ ಮತ್ತು ಬಿಹಾರ ಪ್ರದೇಶಗಳಿಗೆ ಹೋದರು. ಅದೇ ಸಮಯದಲ್ಲಿ ಅವರ ಪತ್ನಿ ಗುಜ್ರಿ ಗಂಡುಮಗುವಿಗೆ ಜನ್ಮ ಕೊಟ್ಟಳು. ಸೂರ್ಯೋದಯವಾಗುವುದಕ್ಕೆ ಮೂರು ಗಂಟೆ ಮುಂಚೆ, ಶುಕ್ರವಾರ, ಜನವರಿ ೫, ೧೬೬೬ರಂದು ಗುರು ಗೋವಿಂದ ಸಿಂಗ್ ಹುಟ್ಟಿದನು. ಒಡನೆಯೇ ತೇಗ್ ಬಹದ್ದೂರರಿಗೆ ವಾರ್ತೆಯನ್ನು ತಲುಪಿಸಲಾಯಿತು. ದೂರದ ಪ್ರದೇಶದಲ್ಲಿದ್ದ ಅವರು ಬರಲು ಸಾಧ್ಯವಾದದ್ದು ೧೬೭೦ರಲ್ಲಿಯೇ. ತದನಂತರ ಅವರೆಲ್ಲ ಪಂಜಾಬಿಗೆ ಹಿಂತಿರುಗಿದರು.

### ಐತಿಹಾಸಿಕ ಘಟನೆ : ಮತೀಯತೆಯ ದಳ್ಳುರಿ

ಗೋವಿಂದ ಸಿಂಗನ ಪ್ರಾಥಮಿಕ ಶಿಕ್ಷಣ ಹೊಸದಾಗಿ ನಿರ್ಮಾಣವಾಗುತ್ತಿದ್ದ ಆನಂದಪುರದಲ್ಲಿ ನಡೆಯಿತು. ಅವನು ಪಂಜಾಬಿ, ಬ್ರಜಭಾಷೆ, ಸಂಸ್ಕೃತ ಮತ್ತು ಪರ್ಷಿಯನ್ ಭಾಷೆಗಳಲ್ಲಿ ಶಿಕ್ಷಣ ಪಡೆಯುತ್ತಿದ್ದನು. ಹಾಗೆಯೇ ಯುದ್ಧವಿದ್ಯೆಯಲ್ಲಿಯೂ ತರಬೇತಿ ಪಡೆಯುತ್ತಿದ್ದನು. ಗೋವಿಂದ ಸಿಂಗನಿಗೆ ಒಂಭತ್ತು ವರ್ಷ ವಯಸ್ಸಾಗಿದ್ದಾಗ, ಐತಿಹಾಸಿಕವಾಗಿ ಬಹಳ ಮಹತ್ವವಾದ ಘಟನೆಯೊಂದು ಜರುಗಿತು.

ಅಂದಿನ ದಿನಗಳಲ್ಲಿ ದೆಹಲಿಯ ಮೊಗಲ್ ರಾಜ ಔರಂಗಜೇಬನು ಹಿಂದೂಗಳು ಮತ್ತು ಸಿಖ್ ಮತೀಯರನ್ನು ಬಹಳ ಹಿಂಸೆ ಮತ್ತು ಅಪಮಾನಗಳಿಗೆ ಒಳಪಡಿಸುತ್ತಿದ್ದನು. ಹಿಂದೂ ದೇವಮಂದಿರಗಳನ್ನು ಕೆಡವಿಸಿದನು. ಆಡಳಿತದಲ್ಲಿ ಇದ್ದ ಹಿಂದೂ ಅಧಿಕಾರಿಗಳನ್ನು ವಜಾ ಮಾಡಿಸಿದನು. ಗುರುದ್ವಾರಗಳನ್ನು ನಿರ್ನಾಮ ಮಾಡಿಸಿದನು. ಹಲವಾರು ಮುಸ್ಲಿಂ ಮತಪ್ರಚಾರಕರನ್ನು ದೇಶದೆಲ್ಲೆಡೆ ಕಳಿಸಿದನು. ಬಲತ್ಕಾರವಾಗಿ ಸಾವಿರಾರು ಜನರು ಇಸ್ಲಾಂ ಧರ್ಮಕ್ಕೆ ಮತಾಂತರವಾದರು.

ಅದರಲ್ಲೂ ಕಾಶ್ಮೀರದ ಹಿಂದೂಗಳ ಸ್ಥಿತಿ ಶೋಚನೀಯವಾಗಿತ್ತು. 'ಪಂಡಿತರು' ಎಂಬ ಹೆಸರಿನ ಅಲ್ಲಿನ ಹಿಂದೂಗಳನ್ನು ಶತಾಯಗತಾಯ ಮತಾಂತರಗೊಳಿಸಬೇಕೆಂದು ಮೊಗಲ ರಾಜ್ಯದ ಪ್ರತಿನಿಧಿ ಇಫ್ತಿಕಾರ್ ಖಾನ್ ಬಲಪ್ರಯೋಗ ಮಾಡುತ್ತಿದ್ದನು. ಕೆಲವು ಮಂದಿ ಭಕ್ತರು ಅಮರನಾಥ ಗುಹಾದೇಗುಲಕ್ಕೆ ಹೋದರು. ತಮ್ಮ ಮೇಲಿನ ಈ ಅತ್ಯಾಚಾರದಿಂದ ಕಾಪಾಡಬೇಕೆಂದು ಭಗವಾನ್ ಶಿವನನ್ನು ಪ್ರಾರ್ಥಿಸಿದರು. ಒಬ್ಬ ಭಕ್ತನಿಗೆ ಕನಸಿನಲ್ಲಿ ಭಗವಾನ್ ಶಿವನೇ ಕಂಡುಬಂದನು. ಹಿಂದೂಧರ್ಮವನ್ನು ರಕ್ಷಿಸಲು ಸಿಖ್ಖರ ಒಂಭತ್ತನೆಯ ಗುರು ತೇಗ್ ಬಹದ್ದೂರ್ ಗುರುಗಳನ್ನು ಬಳಿಸಾರುವಂತೆ ಸಲಹೆ ನೀಡಿದನು. ಅವರೇ ನಿಮ್ಮ ವಿಮೋಚಕರು ಎಂದು ಭಗವಂತನೇ ಬಂದು ಹೇಳಿದನು. ಆ ಭಕ್ತನು ಇತರರಿಗೆ ಕನಸಿನ ವಿಚಾರವನ್ನು ಹೇಳಿದನು. ಅದರಂತೆ ಸುಮಾರು ೫೦೦ ಜನ ಕಾಶ್ಮೀರಿ ಪಂಡಿತರು ಆನಂದಪುರಕ್ಕೆ ತೆರಳಿದರು. ಗುರು ತೇಗ್ ಬಹದ್ದೂರರ ದರ್ಶನವನ್ನು ಪಡೆದುಕೊಂಡರು. ತಮ್ಮ ದಾರುಣ ಪರಿಸ್ಥಿತಿಯನ್ನು ಬಿನ್ನವಿಸಿ ಮಾರ್ಗದರ್ಶನ ಕೋರುವಂತೆ ಕೇಳಿಕೊಂಡರು (ಉಲ್ಲೇಖ: *A History of Kashmir by P.N.K. Bamzi*).

### ಮಹಾನ್ ಬಲಿದಾನಕ್ಕೆ ಸಿದ್ಧತೆ

ಔರಂಗಜೇಬನ ಯೋಜನೆ ಅದ್ಭುತವಾಗಿತ್ತು. ಕಾಶ್ಮೀರದ ಕರ್ಮಠ ಬ್ರಾಹ್ಮಣರನ್ನು ಮತಾಂತರ ಮಾಡಿದರೆ, ದೇಶದ ಲಕ್ಷಾಂತರ ಹಿಂದೂಗಳು ಅವರನ್ನು ಅನುಸರಿಸುತ್ತಾರೆ ಎನ್ನುವುದೇ ಅವನ ಉಪಾಯ. ಕಾಶ್ಮೀರಿ ಪಂಡಿತರ ನಿಯೋಗವು ಇದನ್ನೆಲ್ಲ ಗುರುಗಳಿಗೆ ನಿವೇದಿಸಿತು. ಕೇಳುತ್ತಿದ್ದ ಪುಟ್ಟ ಹುಡುಗ ಗೋವಿಂದ ಸಿಂಗ್, ''ಅಪ್ಪಾ, ಏನಿದು ಸಮಸ್ಯೆ?'' ಎಂದು ಕೇಳಿದನು. ಗುರು ತೇಗ್ ಬಹದ್ದೂರ್ ಹಿಂದೂ ಜನರ ಗೋಳನ್ನು ಮಗನಿಗೆ ವಿವರಿಸಿದರು. ಈ ದಾರುಣ ಸ್ಥಿತಿಯನ್ನು ಸರಿಪಡಿಸಲು ಮಹಾತ್ಮನೊಬ್ಬನು ಬಲಿದಾನ ಮಾಡಬೇಕಾಗಿದೆ ಎಂದು ತಮ್ಮ ಅಭಿಪ್ರಾಯವನ್ನು ತಿಳಿಸಿದರು. ಗೋವಿಂದ ರಾಯ್ ತಂದೆಗೆ ತಕ್ಕ ಮಗ. ''ಅಪ್ಪಾಜಿ, ನಿಮಗಿಂತಲೂ ದೊಡ್ಡ ಮಹಾತ್ಮರು ಬೇರೆ ಯಾರು ತಾನೇ ಇದ್ದಾರೆ? ಬೇರೆ ಯಾರು ತಾನೇ ಈ ಬಡ ಬ್ರಾಹ್ಮಣರನ್ನು ರಕ್ಷಿಸಲು ಸಾಧ್ಯ?'' ಎಂದು ಪ್ರಶ್ನಿಸಿದನು. ಮಗನ ಧೀರೋದಾತ್ತ ಉತ್ತರದಿಂದ ಉತ್ತೇಜಿತರಾದ ಗುರು ತೇಗ್ ಬಹದ್ದೂರರು ಮಹಾನ್ ಬಲಿದಾನಕ್ಕೆ ಸಿದ್ಧರಾದರು. ಬಡ ಕಾಶ್ಮೀರಿ ಪಂಡಿತರ ಧರ್ಮವನ್ನು ಉಳಿಸಲು ಅತ್ಯಂತ ಉದಾತ್ತ ತ್ಯಾಗಕ್ಕೆ ಸನ್ನದ್ಧರಾದರು. ಮೊಗಲರ ದಬ್ಬಾಳಿಕೆಗೆ ಜಗ್ಗದೆ ಪ್ರಾಣತ್ಯಾಗ ಮಾಡುವುದಕ್ಕೂ ಮುಂದಾದರು.

ಅವರು ಹಿಂದೂ ಪಂಡಿತರಿಗೆ ಹೇಳಿದರು, ''ಸಿಖ್ ಗುರು ತೇಗ್ ಬಹದ್ದೂರರನ್ನು ಮತಾಂತರ ಮಾಡುವುದಾದರೆ, ನಾವೆ

ಲ್ಲರೂ ಇಸ್ಲಾಂ ಧರ್ಮವನ್ನು ಒಪ್ಪಿಕೊಳ್ಳುತ್ತೇವೆ ಎಂದು ಮೊಗಲ್ ದೊರೆಗೆ ಹೇಳಿ. ನಾವೇ ಮೊಗಲ್ ದೊರೆಯನ್ನು ಕಾಣುತ್ತೇವೆ.''

ದೆಹಲಿಗೆ ಹೊರಟುನಿಂತ ತೇಗ್ ಬಹದ್ದೂರ್, ಪುತ್ರ ಗೋವಿಂದ ರಾಯನನ್ನು ತಮ್ಮ ಉತ್ತರಾಧಿಕಾರಿಯನ್ನಾಗಿ ನೇಮಿಸಿದರು. ಅದು ನಡೆದಿದ್ದು ಜುಲೈ ೬, ೧೬೭೫ ರಲ್ಲಿ. ಸಮಾರಂಭ ನಡೆದಿದ್ದು ಆನಂದಪುರದಲ್ಲಿ. ಸಂಪ್ರದಾಯದಂತೆ ಗುರುವು ಐದು ಚಿನ್ನದ ನಾಣ್ಯಗಳು ಮತ್ತು ಒಂದು ತೆಂಗಿನ ಕಾಯಿಯನ್ನು ತಮ್ಮ ಮಗನ ಮುಂದೆ ಇರಿಸಿದರು. ಗುರುಪದವಿಯು ತಮ್ಮಿಂದ ಮಗನೆಡೆಗೆ ಹಸ್ತಾಂತರವಾಗುತ್ತಿರುವ ಸಂಕೇತ ಇದು. ಅಂದಿನಿಂದ ಗುರು ಗೋವಿಂದ ರಾಯ್ ಸಿಖ್ಖರ ಹತ್ತನೆಯ ಗುರುವಾದರು.

## ದೆಹಲಿಗೆ ಗುರು ತೇಗ್ ಬಹದ್ದೂರ್

ಗುರು ತೇಗ್ ಬಹದ್ದೂರ್ ತಮ್ಮ ಮೂವರು ಆಪ್ತರ ಜೊತೆಗೆ ದೆಹಲಿಗೆ ಪ್ರಯಾಣ ಬೆಳೆಸಿದರು. ಅವರ ಹೆಸರುಗಳೆಂದರೆ, ಭಾಯಿ ಸತಿ ದಾಸ್, ಭಾಯಿ ಮತಿ ದಾಸ್, ಭಾಯಿ ದಯಾಲ್ ದಾಸ್ ಎಂದು. ಅವರಿಗೆಲ್ಲರಿಗೂ ತಾವು ಎದುರಿಸಬೇಕಾದ ಗಂಭೀರ ಅಪಾಯದ ಅರಿವಿತ್ತು. ನಾಲ್ಕು ದಿನಗಳ ನಂತರ, ಮಾರ್ಗಮಧ್ಯೆ ರೋಪಾರ್ ನಗರದಲ್ಲಿ ಈ ನಾಲ್ಕು ಜನರನ್ನೂ ಮೊಗಲ್ ಸೈನಿಕರು ಬಂಧಿಸಿದರು. ಅದು ನಡೆದಿದ್ದು ಜುಲೈ ೧೨, ೧೬೭೫ ರಂದು. ನಾಲ್ಕು ಬಂಧಿತರನ್ನೂ ಸರ್‌ಹಿಂದ್ ನಗರಕ್ಕೆ ಕಳಿಸಲಾಯಿತು. ನಂತರ ಬಸ್ಸಿನ ಪಠಾಣಾ ಎಂಬಲ್ಲಿ ನಾಲ್ಕು ತಿಂಗಳುಗಳ ಕಾಲ ಸೆರೆಮನೆಯಲ್ಲಿ ಇರಿಸಲಾಯಿತು. ಆ ಸಮಯದಲ್ಲಿ ಗುರು ತೇಗ್ ಬಹದ್ದೂರರನ್ನು ಬಹಳ ಅಪಮಾನ ಮತ್ತು ದೈಹಿಕ ಹಿಂಸೆಗಳಿಗೆ ಗುರಿಮಾಡಲಾಯಿತು. ನಾಲ್ಕು ತಿಂಗಳ ನಂತರ ಗುರುಗಳನ್ನು ಒಂದು ಕಬ್ಬಿಣದ ಪಂಜರದಲ್ಲಿ ಇಟ್ಟು ದೆಹಲಿಗೆ ಕರೆತರಲಾಯಿತು. ಗುರು ತೇಗ್ ಬಹದ್ದೂರ್ ಮತ್ತು ಅವರ ಸಂಗಡಿಗರು ದೆಹಲಿಯನ್ನು ತಲುಪಿದ್ದು ೪, ನವೆಂಬರ್, ೧೬೭೫ ರಂದು.

## ಔರಂಗಜೇಬನೊಂದಿಗೆ ಮುಖಾಮುಖಿ

ಮುಂದೆ ನಡೆದ ಘಟನೆಗಳು ಅತಿ ಅಮಾನವೀಯವಾಗಿವೆ; ಭೀಕರವಾಗಿವೆ. ಇವುಗಳನ್ನು ಸಿಖ್ ಇತಿಹಾಸಕಾರರು ಕರಾರುವಾಕ್ಕಾಗಿ ನಮೂದಿಸಿದ್ದಾರೆ. ಗುರುಗಳು ದೆಹಲಿಯನ್ನು ತಲುಪಿದಾಗ ಅವರನ್ನು ನೋಡಲು ನೂರಾರು ಭಕ್ತರು ನೆರೆದರು. ಗುರು ತೇಗ್ ಬಹದ್ದೂರರನ್ನು ಔರಂಗಜೇಬನ ದರ್ಬಾರಿಗೆ ಕರೆತರಲಾಯಿತು. ಅವರನ್ನು ನೋಡಿ ಔರಂಗಜೇಬನು ಬಹಳ ಪ್ರಭಾವಿತನಾದನು. ಅವರ ಮುಖದಲ್ಲಿ ಮೂಡಿದ್ದ ಆಧ್ಯಾತ್ಮಿಕ ಪ್ರಭೆ ಅವನ ಮನಸ್ಸನ್ನು ಸೂರೆಗೊಂಡಿತು. ''ಇಂಥ ಮಹಾತ್ಮ ಇಸ್ಲಾಂ ಧರ್ಮಕ್ಕೆ ಸೇರಿದರೆ ಎಷ್ಟು ಚೆನ್ನಾಗಿರುತ್ತದೆ'' ಎಂದುಕೊಂಡನು. ''ಕಾಶ್ಮೀರದ ಹಿಂದೂಗಳ ಪಕ್ಷವನ್ನು ಏಕೆ ವಹಿಸುತ್ತಿದ್ದೀಯೆ?'' ಎಂದು ಪ್ರಶ್ನಿಸಿದನು. ಅದಕ್ಕೆ ಗುರುಗಳು ಔರಂಗಜೇಬನಿಗೆ ದೊಡ್ಡ ಉಪನ್ಯಾಸವನ್ನೇ ಮಾಡಿದರು ಎಂದು ಚರಿತ್ರಕಾರರು ಬರೆದಿದ್ದಾರೆ. ''ನಾನು ಬ್ರಾಹ್ಮಣರ ನಂಬಿಕೆಗಳನ್ನು ನಂಬುವುದಿಲ್ಲವಾದರೂ, ಅವುಗಳನ್ನು ಆಚರಿಸುವ ಸ್ವಾತಂತ್ರ್ಯವನ್ನು ಪ್ರತಿಪಾದಿಸುತ್ತೇನೆ. ಅದಕ್ಕಾಗಿ ನನ್ನ ಪ್ರಾಣವನ್ನಾದರೂ ಅರ್ಪಿಸಲು ಸಿದ್ಧನಿದ್ದೇನೆ'' ಎಂದು ಅವರು ಔರಂಗಜೇಬನಿಗೆ ಮನವರಿಕೆ ಮಾಡಿಕೊಟ್ಟರು. ಕೋಪಗೊಂಡ ಔರಂಗಜೇಬನು ಗುರುಗಳ ತಲೆ ಕಡಿಯುವಂತೆ ಆದೇಶಿಸಿದನು.

## ಗುರುಗಳ ಬಲಿದಾನ

ತದನಂತರವೂ ಇಸ್ಲಾಂ ಧರ್ಮಕ್ಕೆ ಮತಾಂತರಗೊಳ್ಳುವಂತೆ ಗುರುಗಳನ್ನು ಒತ್ತಾಯ ಮಾಡಲಾಯಿತು. ಹಿಂಸೆ ಮತ್ತು ಅಪಮಾನಗಳಿಗೆ ಗುರಿಪಡಿಸಲಾಯಿತು. ಅವರನ್ನು ಕಬ್ಬಿಣದ ಪಂಜರದಲ್ಲಿ ಇರಿಸಲಾಯಿತು. ಹಾಗಿದ್ದರೂ ಅವರು ತಮ್ಮ ಮನಸ್ಸನ್ನು ಅತ್ಯಂತ ಪ್ರಸನ್ನವಾಗಿ ಇಟ್ಟುಕೊಂಡಿದ್ದರು. ಸರ್ವದಾ ಪರಮಾತ್ಮನ ಜಪ, ಸ್ಮರಣೆ ಮತ್ತು ಧ್ಯಾನದಲ್ಲಿ ನಿರತರಾಗಿದ್ದರು. ಅವರ ಅನುಯಾಯಿಗಳನ್ನು ಕೂಡ ಭೀಕರವಾದ ಹಿಂಸೆಗೆ ಗುರಿಪಡಿಸಿದರು. ನವೆಂಬರ್ ೨೪, ೧೬೭೫ರಂದು ಗುರು ತೇಗ್ ಬಹದ್ದೂರರ ಶಿರಚ್ಛೇದನ ದೆಹಲಿಯ ಚಾಂದನಿ ಚೌಕದಲ್ಲಿ ನಡೆದೇ ಹೋಯಿತು. ಬಲಿದಾನದ ಅದೇ ಸ್ಥಳದಲ್ಲಿ 'ಗುರುದ್ವಾರ ಸಿಸ್‌ಗಂಜ್ ಸಾಹಿಬ್' ಎಂಬ ಭವ್ಯ ಗುರುದ್ವಾರ ತಲೆಯೆತ್ತಿದೆ.

ಒಡನೆ ದೆಹಲಿಯಲ್ಲಿ ಭಾರೀ ಬಿರುಗಾಳಿ ಉಂಟಾಯಿತು. ಜನರೆಲ್ಲ ಚದುರಿಹೋದರು. ಗುರುಗಳ ಪವಿತ್ರ ದೇಹವನ್ನು ಆರಕ್ಷಕ ಠಾಣೆಯಲ್ಲಿ ಇರಿಸಲಾಯಿತು. ಅದು ಅಲ್ಲಿ ನಿರ್ಗತಿಕವಾಗಿ ಬಿದ್ದಿತ್ತು. ಭಾಯಿ ಲಖಿ ಶಾಹ್ ಎಂಬ ಸಿಖ್ ಭಕ್ತನು ತಲೆ ಕಡಿದ ಮುಂಡವನ್ನು ಒಂದು ಗಾಡಿಯಲ್ಲಿ ಇರಿಸಿ, ರಖಾಬ್‌ಗಂಜ್ ಎಂಬಲ್ಲಿನ ತನ್ನ ಮನೆಗೆ ರಹಸ್ಯವಾಗಿ ಕೊಂಡೊಯ್ದನು. ಅಲ್ಲಿ ಗುರುಗಳ ದೇಹವನ್ನಿಟ್ಟು, ಇತರರಿಗೆ ತಿಳಿಯಬಾರದೆಂದು, ಇಡೀ ಮನೆಯನ್ನೇ ದಹನ ಮಾಡಿಬಿಟ್ಟನು. ಆ ಜಾಗದಲ್ಲಿ 'ಗುರುದ್ವಾರ ರಖಾಬ್ ಗಂಜ್' ಎಂಬ ಭವ್ಯ ಗುರುದ್ವಾರ ತಲೆಯೆತ್ತಿದೆ.

ಇನ್ನು ಗುರುಗಳ ಶಿರದ ಕಥೆ ಇನ್ನೂ ಮಾರ್ಮಿಕವಾಗಿದೆ. ಬಿರುಗಾಳಿಯ ಮಧ್ಯೆ, ಭಾಯಿ ಜೈತಾ ಎಂಬ ಭಕ್ತನು ಧೈರ್ಯದಿಂದ ಗುರುಗಳ ಶಿರವನ್ನು ಎತ್ತಿಕೊಂಡು ರಹಸ್ಯವಾಗಿ ಆನಂದಪುರಕ್ಕೆ ಸಾಗಿಸಿದನು. ನಿಮ್ನ ಜಾತಿಯವನಾದ ಅವನ ಅಪೂರ್ವ ಗುರುಭಕ್ತಿಯನ್ನು ಕಂಡು ಗುರು ಗೋವಿಂದರ ಹೃದಯ ತುಂಬಿಬಂತು. ಭಾಯಿ ಜೈತಾನನ್ನು ಅಪ್ಪಿಕೊಂಡು ಕಣ್ಣೀರು ಸುರಿಸಿದರು. ಗುರುಗಳ ಶಿರವನ್ನು ಆನಂದಪುರದಲ್ಲಿ ತುಂಬು ಗೌರವದಿಂದ ದಹನ ಮಾಡಲಾಯಿತು.

ಗುರುಗಳ ಜೊತೆಗೆ ದೆಹಲಿಗೆ ಹೋಗಿದ್ದ ಭಾಯಿ ಮತಿದಾಸನ ದೇಹವನ್ನು ತುಂಡುತುಂಡಾಗಿ ಕತ್ತರಿಸಲಾಯಿತು. ಭಾಯಿ ದಯಾಲ್ ದಾಸನನ್ನು ಕುದಿಯುವ ನೀರಿನ ಕಡಾಯಿಗೆ ಎಸೆಯಲಾಯಿತು. ಇನ್ನೊಬ್ಬ ವೀರ ಭಾಯಿ ಸತಿದಾಸನ ದೇಹವನ್ನೂ ತುಂಡುತುಂಡಾಗಿ ಕತ್ತರಿಸಿ ಎಸೆಯಲಾಯಿತು.

ಇದು ಗುರು ತೇಗ್ ಬಹದ್ದೂರರ ಅಪೂರ್ವ ತ್ಯಾಗದ ಗಾಥೆ. ಈ ಅಭೂತಪೂರ್ವ ಬಲಿದಾನವು ಭವಿಷ್ಯದಲ್ಲಿ ಐತಿಹಾಸಿಕವಾಗಿ ಬಹಳ ಪರಿಣಾಮ ಬೀರಿತು. ಸಿಖ್ ಸಂಪ್ರದಾಯವು ಸುಭದ್ರವಾಗಿ ಸಂಸ್ಥಾಪಿತವಾಯಿತು. ಹಿಂದೂಧರ್ಮದ ರಕ್ಷಣೆಯಾಯಿತು.

# ಕಲಿಕಾಮ ನಾಯನಾರ್

ಕಥೆ : ಪರುತಿಯೂರು ಕೆ. ಸಂತಾನರಾಮನ್ ಚಿತ್ರ: ಶಂಕರ್

1 ಕಲಿಕಾಮ ನಾಯನಾರ್ ತಮಿಳುನಾಡಿನ ಶೈವ ಸಂತರಲ್ಲೊಬ್ಬ. ಅವನು ಪೆರುಮಂಗಲಮ್ ಎಂಬ ಗ್ರಾಮದಲ್ಲಿ ಹುಟ್ಟಿದನು. ಅಲ್ಲಿನ ಏಯರ್ ಎಂಬ ಪಂಗಡಕ್ಕೆ ಅವನು ಸೇರಿದ್ದನು. ಚೋಳರಾಜಂದಿರು ತಮ್ಮ ಸೇನಾಪತಿಗಳನ್ನು ಈ ಪಂಗಡದಿಂದಲೇ ಆರಿಸುತ್ತಿದ್ದರು.

2 ಒಂದು ದಿನ ತಿರುವಾರೂರಿನಿಂದ ಒಬ್ಬ ಶಿವಭಕ್ತನು ಕಲಿಕಾಮನ ಮನೆಗೆ ಬಂದನು.







4 ಸುಂದರರ ಬಳಿಗೆ ಈ ಸುದ್ದಿ ತಲುಪಿತು.



5 ಕೈಲಾಸದಲ್ಲಿ ...




6 ಶಿವನ ಇಚ್ಛೆಯಂತೆ ಕಲಿಕಾಮನು ಭಯಂಕರ ಹೊಟ್ಟೆನೋವಿನಿಂದ ನರಳತೊಡಗಿದ. ಆಗ ಅವನ ಮುಂದೆ ಶಿವನು ಕಾಣಿಸಿಕೊಂಡ.




7 ಅದಾದ ಮೇಲೆ ಶಿವನು ಸುಂದರನ ಮುಂದೆ ಪ್ರತ್ಯಕ್ಷನಾದ.




8



9 ಸೇವಕನು ಎಷ್ಟೇ ತಡೆದರೂ, ಕಲಿಕಾಮನು ಕಠಾರಿಯಿಂದ ಇರಿದುಕೊಂಡು ಸತ್ತುಬಿಟ್ಟನು.

**10** ಅಷ್ಟರಲ್ಲಿ ಸುಂದರರು ಕಲಿಕಾಮನ ಮನೆಯನ್ನು ತಲುಪಿದರು. ಕಲಿಕಾಮನ ಪತ್ನಿ ತನ್ನ ದುಃಖವನ್ನು ಅಡಗಿಸಿಕೊಂಡು, ತನ್ನ ಪತಿಯ ಕೋಣೆಗೆ ಅಗಳಿ ಹಾಕಿ, ಹೊರಬಂದಳು. ಸುಂದರಮೂರ್ತಿ ನಾಯನಾರರನ್ನು ಸ್ವಾಗತಿಸಿದ ಅವಳು ಏನೂ ಆಗಿಲ್ಲವೆನೋ ಎಂಬಂತೆ ನಡೆದುಕೊಂಡಳು. ತಾನು ಕೂಡಲೇ ಕಲಿಕಾಮನನ್ನು ಭೇಟಿಯಾಗಬೇಕು ಎಂದು ಸುಂದರರು ಅವಳನ್ನು ಕೇಳಿಕೊಂಡರು.

**11**




**12** ತಕ್ಷಣ ಕಲಿಕಾಮನ ಕೋಣೆಯನ್ನು ಹೊಕ್ಕ ಸುಂದರರು, ರಕ್ತದ ಮಡುವಿನಲ್ಲಿ ಸತ್ತು ಬಿದ್ದಿದ್ದ ಕಲಿಕಾಮನನ್ನು ಕಂಡರು.




**13** ಕಲಿಕಾಮನ ದೇಹದಲ್ಲಿ ನೆಟ್ಟಿದ್ದ ಕಠಾರಿಯನ್ನು ಸುಂದರರು ಹೊರಗೆಳೆದರು. ಆದರೆ ದೇವರ ಕೃಪೆಯಿಂದ ಆ ಕ್ಷಣದಲ್ಲೇ ಕಲಿಕಾಮ ತನ್ನ ಕಣ್ಣುಗಳನ್ನು ತೆರೆದ. ಅವನು ಪ್ರಾಣತ್ಯಾಗ ಮಾಡಲು ಹೊರಟಿದ್ದ ಸುಂದರರನ್ನು ತಡೆದ.

**14**




**15**




ಅವರಿಬ್ಬರೂ ಆಲಿಂಗಿಸಿಕೊಂಡರು. ಅನಂತರ ಇಬ್ಬರೂ ತಿರುಪುಂಗೂರ್ ಕ್ಷೇತ್ರಕ್ಕೆ ಹೋಗಿ, ಶಿವನ ದರ್ಶನ ಮಾಡಿದರು.

**16**

ಇತ್ತ ಕೈಲಾಸದಲ್ಲಿ ...




''ನಿನಗೆ ದುಃಖ, ಸಂದೇಹಗಳು ಬಂದಾಗ ಅಥವಾ ಮುಕ್ತಿಯ ವಿಚಾರದಲ್ಲಿ ಗೊಂದಲವುಂಟಾದಾಗ ಕಣ್ಣೀರು ತುಂಬಿ ದೇವರನ್ನು ಪ್ರಾರ್ಥಿಸು. ಅವನು ನಿನ್ನ ಎಲ್ಲ ಕುಂದುಕೊರತೆಗಳನ್ನೂ ನಿವಾರಿಸುವನು. ನಿನ್ನ ದುಃಖವನ್ನು ಪರಿಹರಿಸಿ, ನಿನಗೆ ಸಾಕ್ಷಾತ್ಕಾರ ನೀಡುವನು.''

- ಶ್ರೀಮಾತೆ ಶಾರದಾದೇವಿ



# ರಾಮಕೃಷ್ಣ ಮಹಾಸಂಘದ ಇತ್ತೀಚಿನ ಚಟುವಟಿಕೆಗಳು

**ಹೊಸ ಶಾಖಾ ಕೇಂದ್ರಗಳು: ೧. ಝಾರಗ್ರಾಮ:** ಪಶ್ಚಿಮ ಬಂಗಾಳದ ಝಾರಗ್ರಾಮದಲ್ಲಿರುವ ಏಕಲವ್ಯ ಮಾದರಿ ವಸತಿ ಶಾಲೆ (EMRS) ಹಾಗೂ ಸಮೀಪದ ಜಮೀನಿನಲ್ಲಿ ರಾಮಕೃಷ್ಣ ಮಿಷನ್ನಿನ ಹೊಸ ಕೇಂದ್ರವು ಆರಂಭವಾಯಿತು. ಈ ಮೊದಲು ಸರ್ಕಾರವೇ ನಡೆಸುತ್ತಿದ್ದ ಈ ಶಾಲೆಯನ್ನು ರಾಮಕೃಷ್ಣ ಮಿಷನ್ನಿಗೆ ಹಸ್ತಾಂತರಿಸಿದ ಬಳಿಕ ಇದನ್ನು ''ರಾಮಕೃಷ್ಣ ಮಿಷನ್ ವಿದ್ಯಾಮಂದಿರ (EMRS)'' ಎಂದು ಮರು ನಾಮಕರಣ ಮಾಡಲಾಯಿತು.

**೨. ಲಮ್‌ಡಂಗ್:** ಅರುಣಾಚಲ ಪ್ರದೇಶದ ಪೂರ್ವ ಕಮೆಂಗ್ ಜಿಲ್ಲೆಯ ಲಮ್‌ಡಂಗ್ ಗ್ರಾಮದ ೩೬ ಎಕರೆ ಪ್ರದೇಶದಲ್ಲಿ ರಾಮಕೃಷ್ಣ ಮಿಷನ್ನಿನ ಹೊಸ ಶಾಖಾಕೇಂದ್ರವು ಆರಂಭವಾಯಿತು. ಲಮ್‌ಡಂಗ್ ಪ್ರದೇಶದ ಜನತೆ ಹಾಗೂ ನಾಂಫೀ ನಾಟುಂಗ್ ಮೊಯಾ ತಾಥಾ ವೆಲ್ಫೇರ್ ಸೊಸೈಟಿ ಈ ಜಮೀನನ್ನು ದಾನವಾಗಿ ನೀಡಿದೆ.



ಲಮ್‌ಡಂಗ್ ಗ್ರಾಮ

**೩.** ಕೊಲ್ಕತ್ತದ **ನ್ಯೂ ಟೌನ್**ನಲ್ಲಿ ಪಶ್ಚಿಮ ಬಂಗಾಳ ಸರ್ಕಾರ ನೀಡಿದ ಐದು ಎಕರೆಯ ಜಮೀನಿನಲ್ಲಿ ರಾಮಕೃಷ್ಣ ಮಿಷನ್ನಿನ ಹೊಸ ಶಾಖಾಕೇಂದ್ರವು ಆರಂಭವಾಯಿತು. 'ರಾಮಕೃಷ್ಣ ಮಿಷನ್ ಕಲ್ಚರ್ ಫಾರ್ ಹ್ಯೂಮನ್ ಎಕ್ಸಲೆನ್ಸ್' ಎಂಬ ಹೆಸರಿನಿಂದ ಆರಂಭವಾದ ಈ ಕೇಂದ್ರದ ಕಟ್ಟಡ ನಿರ್ಮಾಣ ಕಾರ್ಯಗಳು ಆರಂಭವಾಗಿವೆ.



## ಸೋದರಿ ನಿವೇದಿತಾ ಅವರ ೧೫೦ನೇ ಜಯಂತ್ಯುತ್ಸವ

ಸೋದರಿ ನಿವೇದಿತಾ ಅವರ ೧೫೦ನೇ ಜಯಂತಿ ಉತ್ಸವದ ಅಂಗವಾಗಿ ಹಲವು ಶಾಖಾ ಕೇಂದ್ರಗಳಲ್ಲಿ ವಿವಿಧ ಕಾರ್ಯಕ್ರಮಗಳು ನಡೆದವು. **ಆಂಟ್‌ಪುರ ಕೇಂದ್ರ**ವು ಜುಲೈ ೩೦ರಂದು ನಡೆಸಿದ **ಯುವ ಸಮ್ಮೇಳನ**ದಲ್ಲಿ ೧೫೩ ಮಂದಿ ಯುವಕರು ಭಾಗವಹಿಸಿದರು.

**ಚೆನ್ನೈನ ರಾಮಕೃಷ್ಣ ಮಠ**ವು ತಿರುವಣ್ಣಾಮಲೈ ಜಿಲ್ಲೆಯ ಚೆಂಗಂ ಎಂಬಲ್ಲಿ ವಿದ್ಯಾರ್ಥಿಗಳಿಗಾಗಿ ಆಗಸ್ಟ್ ೧೧ರಂದು ನಡೆಸಿದ ಸಮ್ಮೇಳನದಲ್ಲಿ ೨೦೦ ಮಂದಿ ವಿದ್ಯಾರ್ಥಿಗಳು ಭಾಗವಹಿಸಿದ್ದರು. **ಕೊಯಮತ್ತೂರು ಮಿಷನ್ ವಿದ್ಯಾಲಯ**ವು ಕೊಯಮತ್ತೂರಿನ ಸಮೀಪದ ೩ ಹಳ್ಳಿಗಳಲ್ಲಿ ಆಗಸ್ಟ್ ೨ ಹಾಗೂ ೧೬ರಂದು ನಡೆಸಿದ **ರಸಪ್ರಶ್ನೆ ಸ್ಪರ್ಧಾ ಕಾರ್ಯಕ್ರಮ**ದಲ್ಲಿ ೩೦೨ ಮಂದಿ (ಬಹುತೇಕ ವಿದ್ಯಾರ್ಥಿಗಳು) ಭಾಗವಹಿಸಿದರು.

**ಲಾಲ್‌ಘರ್ ಆಶ್ರಮ**ವು ಏಪ್ರಿಲ್ ೨೫, ೨೬ರಂದು ಮೆರವಣಿಗೆ, ಸಾಂಸ್ಕೃತಿಕ ಸ್ಪರ್ಧೆ ಹಾಗೂ ಸಾರ್ವಜನಿಕ ಸಭೆಗಳನ್ನು ಏರ್ಪಡಿಸಿತು. **ಸೇಲಂ ಆಶ್ರಮ**ವು ಜುಲೈ ೧೩ರಿಂದ ಆಗಸ್ಟ್ ೧೮ರ ವರೆಗೆ ಸೇಲಂ ಸುತ್ತಣ ಪ್ರದೇಶದ ಆರು ಶಾಲೆಗಳಲ್ಲಿ ವಿವಿಧ ಕಾರ್ಯಕ್ರಮಗಳನ್ನು ನಡೆಸಿತು. ಸುಮಾರು ೧೪೭೨ ಮಂದಿ ವಿದ್ಯಾರ್ಥಿ, ವಿದ್ಯಾರ್ಥಿನಿಯರು ಇದರಲ್ಲಿ ಭಾಗವಹಿಸಿದ್ದರು. ಆಶ್ರಮವು ಆಗಸ್ಟ್ ೨೮ರಂದು ಒಂದು **ಯುವ ಸಮ್ಮೇಳನ**ವನ್ನೂ ನಡೆಸಿತು. ಇದರಲ್ಲಿ ೯೦೦ ಮಂದಿ ವಿದ್ಯಾರ್ಥಿಗಳು ಭಾಗವಹಿಸಿದ್ದರು. **ಶಾರದಾಪೀಠ**ವು ಬೇಲೂರು ಹಾಗೂ ರಹರಾದಲ್ಲಿರುವ ಎರಡು ಬಾಲಕಿಯರ ಶಾಲೆಗಳಲ್ಲಿ ಆಗಸ್ಟ್ ೧೭ ಹಾಗೂ ೧೮ ರಂದು **ವಿಚಾರ ಸಂಕಿರಣ**ಗಳನ್ನು ನಡೆಸಿತು. ಸುಮಾರು ೫೦೦ ಮಂದಿ ವಿದ್ಯಾರ್ಥಿನಿಯರು ಹಾಗೂ ೫೦ ಮಂದಿ ಅಧ್ಯಾಪಕರು ಇದರಲ್ಲಿ ಪಾಲ್ಗೊಂಡಿದ್ದರು. **ಸರೀಷ ಆಶ್ರಮ**ವು ಜುಲೈ ೧ರಂದು ವಿವಿಧ ಶಾಲೆಗಳಲ್ಲಿ ನಡೆಸಿದ **ಅಧ್ಯಾಪಕರ ವಿಚಾರ ಸಂಕಿರಣ**ದಲ್ಲಿ ೬೫ ಮಂದಿ ಅಧ್ಯಾಪಕರು ಭಾಗವಹಿಸಿದ್ದರು. **ಸ್ವಾಮಿ ವಿವೇಕಾನಂದರ ನಿವಾಸ**ವು ಜುಲೈ ೨೮ರಿಂದ ಆಗಸ್ಟ್ ೯ರ ಅವಧಿಯಲ್ಲಿ ಮೂರು ಪ್ರದೇಶಗಳಲ್ಲಿ ನಾಲ್ಕು **ಪ್ರವಚನ ಕಾರ್ಯಕ್ರಮ**ಗಳನ್ನು ಏರ್ಪಡಿಸಿತು. ಇದರಲ್ಲಿ ೧೪೧೦ ಮಂದಿ ಭಾಗವಹಿಸಿದ್ದರು. ಇದೇ ಸಮಯದಲ್ಲಿ ಕೊಲ್ಕತ್ತದ ಪ್ರದೇಶಗಳಲ್ಲಿ ಮೂರು ಪ್ರವಚನಗಳನ್ನು ಕೇಂದ್ರವು ಏರ್ಪಡಿಸಿತು. ಇದರಲ್ಲಿ ಸುಮಾರು ೧೦೦೦ ಮಂದಿ ಭಾಗವಹಿಸಿದರು. **ವಾರಣಾಸಿ ಸೇವಾಶ್ರಮ**ವು ಆಗಸ್ಟ್ ೨೭ರಂದು **ಭಕ್ತಿ ಸಂಗೀತ ಕಾರ್ಯಕ್ರಮ**ವನ್ನು ನಡೆಸಿತು.

**ಉಚಿತ ನೇತ್ರ ಚಿಕಿತ್ಸಾ ಶಿಬಿರಗಳು:** ಬಂಕುರ, ವರ್ಧಮಾನ, ಚೆನ್ನೈ ಮಠ, ದೆಹಲಿ, ಘಾಟ್‌ಶಿಲಾ, ಹಲಸೂರು, ಕಾಮಾರಪುಕುರ, ಕಾನ್‌ಪುರ, ಲಕ್ನೋ, ಮದುರೈ, ಮಾಯಾವತಿ, ಮೇದಿನೀಪುರ, ಪೋರ್ ಬಂದರ್, ರಾಜಾಮುಂಡ್ರಿ, ರಾಜ್‌ಕೋಟ್, ರಾಂಚಿ ಮೊರಬಾದಿ, ಸೇಲಂ, ಸೇವಾ ಪ್ರತಿಷ್ಠಾನ, ಸಿಲ್‌ಚಾರ್ ಕೇಂದ್ರಗಳು **ಉಚಿತ ನೇತ್ರ ಚಿಕಿತ್ಸಾ ಶಿಬಿರ**ಗಳನ್ನು ನಡೆಸಿದವು. ಇವುಗಳಲ್ಲಿ ಸುಮಾರು ೨೫,೦೦೦ಕ್ಕೂ ಹೆಚ್ಚು ಮಂದಿ ತಪಾಸಣೆ ನಡೆಸಿದರು.




ಉಚಿತ ನೇತ್ರ ಚಿಕಿತ್ಸಾ ಶಿಬಿರ

**ನೈತಿಕ ಶಿಕ್ಷಣ ಹಾಗೂ ಯುವಕರಿಗಾಗಿ ಕಾರ್ಯಕ್ರಮ:** ದೆಹಲಿ ಆಶ್ರಮವು ಆಗಸ್ಟ್ ೨ರಿಂದ ೩೦ರವರೆ ೧೬ **ನೈತಿಕ ಶಿಕ್ಷಣ ಶಿಬಿರ**ಗಳನ್ನು ಆಯೋಜಿಸಿತು. ೮ ರಾಜ್ಯಗಳಲ್ಲಿ ಹಾಗೂ ದೆಹಲಿ, ಚಂಡೀಗಢಗಳಲ್ಲಿ ನಡೆದ ಈ ಶಿಬಿರಗಳಲ್ಲಿ ೯೧೦ ಮಂದಿ ಅಧ್ಯಾಪಕರು ಹಾಗೂ ೭೦ ಮಂದಿ ಪ್ರಾಂಶುಪಾಲರುಗಳು ಭಾಗವಹಿಸಿದ್ದರು.

**ಸ್ವಚ್ಛ ಭಾರತ ಅಭಿಯಾನ:** **ಬಂಕುರಾ ಆಶ್ರಮ**ವು ಆಗಸ್ಟ್ ೧೩ರಂದು ನಡೆಸಿದ ಸ್ವಚ್ಛತಾ ಕಾರ್ಯಕ್ರಮದಲ್ಲಿ ಆಸ್ಪತ್ರೆಯ ಆವರಣವನ್ನು ಸ್ವಚ್ಛಗೊಳಿಸಲಾಯಿತು. **ಕೊಯಮತ್ತೂರು ಮಿಷನ್ ವಿದ್ಯಾಲಯ**ವು ಆಗಸ್ಟ್ ೧ರಿಂದ ೧೨ರ ವರೆಗೆ ನಾಲ್ಕು ಸ್ವಚ್ಛತಾ ಕಾರ್ಯಕ್ರಮಗಳನ್ನು ನಡೆಸಿದ್ದು, ವಿದ್ಯಾಲಯದ ವಿದ್ಯಾರ್ಥಿಗಳು ಕೆಲವು ಸಾರ್ವಜನಿಕ ಸ್ಥಳಗಳನ್ನು ಸ್ವಚ್ಛಗೊಳಿಸಿದರು. ಇದರಲ್ಲಿ ಒಂದು ದೇವಾಲಯವೂ ಸೇರಿತ್ತು. **ಮೈಸೂರು ರಾಮಕೃಷ್ಣ ಆಶ್ರಮ**ವು ಆಗಸ್ಟ್ ೬, ೨೦, ೨೭ರಂದು ಮೂರು ಸ್ವಚ್ಛತಾ ಕಾರ್ಯಕ್ರಮಗಳನ್ನು ನಡೆಸಿತು. ನಗರದ ವಿವಿಧ ಪ್ರದೇಶಗಳಲ್ಲಿ ಸ್ವಯಂಸೇವಕರ ದೊಡ್ಡ ತಂಡ ಭಾಗವಹಿಸಿತ್ತು. ಪ್ರದೇಶಗಳನ್ನು ಸ್ವಚ್ಛಗೊಳಿಸುವುದರೊಂದಿಗೆ ಸ್ವಯಂಸೇವಕರು ಹಲವು ಮನೆಗಳಿಗೆ ಹಾಗೂ ವಾಣಿಜ್ಯ ಸಂಕೀರ್ಣಗಳಿಗೆ ಭೇಟಿಯಿತ್ತು, ಜನರಿಗೆ ಸ್ವಚ್ಛತೆಯ ಅರಿವನ್ನು ಮೂಡಿಸಲು ಪ್ರಯತ್ನಿಸಿದರು.

Managing Editor : Swami Atmajnananda Editor : Swami Jnanayogananda
Printed and Published by Swami Atmajnananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

